# ಚಂದಮಾಮ

ಸಂಸ್ಥಾಪಕರು: 'ಚಕ್ರಪಾಣಿ'

ಸಂಚಾಲಕರು: ನಾಗಿರೆಡ್ಡಿ

---

ಬರಲಿರುವ "೧೯೭೯" ಬಾಲ ಸಂವತ್ಸರವೆಂದು ಪ್ರಪಂಚದೊಳಗೆಲ್ಲಾ ಅಮಲಿಗೆ ಬರುತ್ತದೆ. ಭಾರತದೇಶದ ೩೦ ಕೋಟಿ ಬಾಲರ ಪರವಾಗಿ "ಚಂದಮಾಮ" ಬಾಲ ಸಂವತ್ಸರವನ್ನು ಸ್ವಾಗತ ಮಾಡುತ್ತದೆ. ಆ ಸಂವತ್ಸರವಿಡೀ ಚಂದಮಾಮವು "ಪುರಾಣ ಬಾಲರ" ಕಥೆಗಳನ್ನು ಪ್ರತಿ ತಿಂಗಳೂ ಪ್ರಕಟಿಸುತ್ತದೆ.

ಅಕ್ಟೋಬರಿನ ಗೆದ್ದ ಕಥಾಶೀರ್ಷಿಕೆ: ಹೀಗಾದರೂ ಭಕ್ತಿ ಯಾಕೆ ಬೇಕೋ?

ಕಳುಹಿಸಿದವರು: ಶ್ರೀ ಪಿ. ಜಿ. ರಾವ್, ೫, ಶೇಷಾದ್ರಿ ರೋಡ್-೫೬೦೦೦೯

## ಅಮರವಾಣಿ

ಅನುಕೂಲಾಂ ವಿಮಲಾಂಗೀಂ ಕುಲಜಾಂ
ಕುಶಲಾಂ ಸುಶೀಲ ಸಂಪನ್ನಾಂ
ಪಂಚಲಕಾರಾಂ ಭಾರ್ಯಾಂ ಪುರುಷಃ
ಪುಣ್ಯೋದಯಾಲ್ಲಭತೇ ೩.

[ಅನುಕೂಲವತಿಯೂ, ಸೌಂದರ್ಯ ತುಂಬಿದವಳೂ, ಒಳ್ಳೆಯ ಕುಲದಲ್ಲಿ ಹುಟ್ಟಿದವಳೂ, ಒಳ್ಳೆಯ ಗುಣದವಳೂ, ಜಾಣೆಯಾದವಳೂ ಗಂಡನ ಪುಣ್ಯದಿಂದಲೇ ಸಿಕ್ಕುವಳು.]

---

ಸಂಪುಟ: ೬೧ ಡಿಸೆಂಬರ್ '೭೮ ಸಂಚಿಕೆ: ೬

ಬಿಡಿ ಪ್ರತಿ ರೂ. ೧-೨೫ :: ವಾರ್ಷಿಕ ಚಂದಾ ರೂ, ೧೫-೦೦






**ಶ್ರೀಹರಿ ವಿ. ಡಾಮಲೆ, ಭಂಡಿಹೊಳೆ (ಕರ್ನಾಟಕ)**

ಪ್ರ: ಹಣ ಎಂಬ ವಸ್ತು ಹೇಗೆ ಬಂತು ?

ಉ: ಮನುಷ್ಯನು ಕಾಡಾಡಿಯಾಗಿದ್ದಾಗ ಬೇಕಾದ ಸಂಪತ್ತು, ಅಂದರೆ ತಿಂಡಿ ಬಟ್ಟೆಗಳು ಪ್ರಕೃತಿಯಲ್ಲೇ ಲಭಿಸುತ್ತಿದ್ದುವು. ಮನುಷ್ಯನು ಆಹಾರವನ್ನು ಆರಿಸಿಕೊಳ್ಳುತ್ತಿದ್ದನು, ಅಥವಾ ಬೇಟೆಯಾಡುತ್ತಿದ್ದನು. ಆ ದಶೆಯಲ್ಲಿ ಮೃಗಗಳ ಚರ್ಮಗಳನ್ನು ಬಟ್ಟೆಗಳಾಗಿಯೂ, ಮನೆಯ ಆಚ್ಛಾದನೆಗಾಗಿಯೂ ಉಪಯೋಗಿಸಿಕೊಂಡನು.

ಕ್ರಮವಾಗಿ ಮನುಷ್ಯನು ತನಗೆ ಬೇಕಾದ ಸಂಪತ್ತನ್ನು ತಾನೇ ಉತ್ಪತ್ತಿಮಾಡಲು ತೊಡಗಿದನು. ವ್ಯವಸಾಯವೂ ಪಶು ಪೋಷಣೆಯೂ ಅಭಿವೃದ್ಧಿಗೆ ಬಂದಂತೆ, ಕೃಷಿಯಿಂದ ಒಬ್ಬ ಮನುಷ್ಯ ಹತ್ತು ಮಂದಿಗೆ ಊಟಹಾಕಲು ಸಾಧ್ಯವಾಯಿತು. ಅಂದರೆ ಮನುಷ್ಯನು ತನ್ನ ಅಗತ್ಯತೆಗಳಿಗಿಂತಲೂ ಹೆಚ್ಚು ಉತ್ಪತ್ತಿಮಾಡುವ ದಶೆಗೆ ಬಂದನು.

ಆ ವಿಧವಾಗಿ ಸಮಾಜದಲ್ಲಿ ಅನೇಕರು ಆಹಾರೋತ್ಪತ್ತಿಯಿಂದ ತಪ್ಪಿಕೊಂಡು ಕಮ್ಮಾರಿಕೆ, ಕುಂಬಾರಿಕೆ, ಬಡಗಿ, ಶಿಲ್ಪ, ಆಭರಣ ತಯಾರಿಕೆ ಮುಂತಾದ ಕೆಲಸಗಳನ್ನು ಕಲಿತು, ಬಹುಮುಖವಾಗಿ ಸಂಪತ್ತನ್ನು ಹೆಚ್ಚಿಸಿಕೊಳ್ಳಲು ಅವಕಾಶವಾಯಿತು.

ಇದೇ ಪರಿಣಾಮ ಬೇರೆಬೇರೆ ಸಂಘಸಮಾಜಗಳಲ್ಲಿ ನಡೆಯತೊಡಗಿತು. ಅಂದರೆ ಅನೇಕ ಸಂಘಗಳು ತಮ್ಮ ಅಗತ್ಯಕ್ಕೆ ಮೀರಿ ಉತ್ಪತ್ತಿಮಾಡಲು ಶಕ್ತವಾದುವು. ಎಲ್ಲಾ ಸಂಘಗಳೂ ಒಂದೇ ಬಗೆಯ ಸಂಪತ್ತನ್ನು ಸೃಷ್ಟಿಸುವಂತಿಲ್ಲವಾದುದರಿಂದ ವಿನಿಮಯದ ಮೂಲಕ ಸಂಘಗಳಿಂದ ಸಂಘಕ್ಕೆ ಹರಡಿ ಆದರ ಪ್ರಭಾವ ವಿಸ್ತರಿಸಿತು.

ಆದರೆ ಕೇವಲ ಸಂಪತ್ತನ್ನು ಮಾತ್ರ ಆಕರ ಮಾಡಿಕೊಳ್ಳುವುದರಿಂದ ಸ್ವಲ್ಪ ಪ್ರಯೋಜನವೇ ಇರುತ್ತದೆ. ಅದಕ್ಕಿಂತ ವ್ಯಾಪಾರದಿಂದ ಹೆಚ್ಚು ಲಾಭವಿದೆ. ಮಾತಿಗೆ ಹೇಳುವುದಾದರೆ ಒಬ್ಬ ರೈತನ ಹತ್ತಿರ ಸ್ವಲ್ಪ ಧಾನ್ಯವೂ ಇನ್ನೊಬ್ಬ ಕುಂಬಾರನ ಹತ್ತಿರ ಕೆಲವು ಮಡಿಕೆಗಳೂ ಹೆಚ್ಚಾದುವೆಂದುಕೊಳ್ಳೋಣ. ಅವುಗಳಿಗೆ ಸಮೀಪ ಪ್ರಾಂತದಲ್ಲಿ ಗಿರಾಕಿ ಇಲ್ಲ. ಆದರೆ ವರ್ತಕನು ಹತ್ತು ಮಂದಿಗಳಿಂದ ಉಳಿದ ಧಾನ್ಯಗಳನ್ನು ಶೇಖರಣೆ ಮಾಡಿ ದೊಡ್ಡ ಮೊತ್ತದಲ್ಲಿ ಕೂಡಿಸಿ, ಅದನ್ನು ಗಿರಾಕಿಗಳು ಇರುವಲ್ಲಿಗೆ ಒಯ್ದು ಮಾರಬಹುದು.

ಕೊಳ್ಳುವುದು ಮಾರುವುದು ಎಂದಾಗ ಬೇರೆಬೇರೆ ವಸ್ತುಗಳ ಬೆಲೆಯನ್ನು ಹೇಗೋ ಒಂದು ನಿರ್ಣಯ ಮಾಡಬೇಕು. ಅದೇ ಹಣ. (ಲೋಹದ ನಾಣ್ಯಗಳು ಬರುವುದಕ್ಕೆ ಮೊದಲು ಪ್ರಾಕೃತ ದಶೆಯಲ್ಲಿ ಹಣವು ಕವಡೆ ಮುಂತಾದ ರೂಪದಲ್ಲಿ ಚಲಾವಣೆಯಾಯಿತು.) ತಾಮ್ರ, ಬೆಳ್ಳಿ, ಬಂಗಾರಗಳಿಂದಾದ ಈ ಹಣವನ್ನು ಎಷ್ಟು ಚಿಕ್ಕ ಮೊತ್ತದಿಂದಾದರೂ ಉಳಿಸಿಕೊಳ್ಳಬಹುದು.

ತಿಂಗಳಿಗೆ ಒಂದು ಬೆಳ್ಳಿ ನಾಣ್ಯ ಬೆಲೆಯ ಪ್ರತ್ಯೇಕ ಸಂಪದವಿದ್ದವನು ಕೂಡ ನೂರು ತಿಂಗಳು ಹಣವನ್ನು ಸೇರಿಸಿ, ನೂರು ಬೆಳ್ಳಿ ನಾಣ್ಯಗಳಷ್ಟು ಬೆಲೆಯ ವಿಶೇಷ ವಸ್ತುವನ್ನು ಕೊಂಡುಕೊಳ್ಳಬಹುದು. ಹಣವಿಲ್ಲದಿದ್ದರೆ ನಾವು ನಾಗರಿಕತೆ ಎಂದುಕೊಳ್ಳುವುದಕ್ಕೆ ಸಾಧ್ಯವಿದ್ದಿಲ್ಲವೆಂದರೆ ಅತಿಶಯೋಕ್ತಿಯಾಗದು.






ನರಿಯ ಮಾತು ಕೇಳಿ ಲಂಬಕರ್ಣ ಕತ್ತೆಗೆ ತೀವ್ರವಾದ ಆಸಕ್ತಿಯುಂಟಾಯಿತು. ನರಿಯೊಂದಿಗೆ ಹೊರಡಲು ಅವಸರಪಟ್ಟಿತು. ನರಿ ಗೆದ್ದೆನೆಂಬ ಸಂತೋಷದಿಂದ ಅದನ್ನು ಸಿಂಹದ ಬಳಿಗೆ ಕರೆದುಕೊಂಡು ಹೋಯಿತು.

ಕತ್ತೆ ಏನೂ ಹೆದರದೆ ಬಹುನೆಮ್ಮದಿಯಾಗಿ ಬರುವುದನ್ನು ನೋಡಿ ಅತ್ಯಾತುರದಲ್ಲಿದ್ದ ಸಿಂಹ, ಹಸಿವೆಯ ಅವಸರದಲ್ಲಿ ಬುದ್ಧಿಮಂಕಾಗಿ, ಎಲ್ಲ ಶಕ್ತಿಯನ್ನೂ ಒಟ್ಟುಗೂಡಿಸಿ ಕತ್ತೆಯ ಮೇಲೆ ಹಾರಿತು. ಅದೇ ಮೋಸವಾಯಿತು.

ಅದು ಬೇಕಾದುದಕ್ಕಿಂತ ಹೆಚ್ಚಿನ ಬಲವನ್ನು ಉಪಯೋಗಿಸಿದುದರಿಂದ ಕತ್ತೆಯ ಮೇಲಿನಿಂದಾಗಿ ಅದನ್ನು ದಾಟಿ ದೂರಬಿತ್ತು. ಮೊದಲೇ ಗಾಯಗೊಂಡ ಸಿಂಹವಾದುದರಿಂದ, ಹಾರಿದ ಆಯಾಸದಲ್ಲಿ ಸ್ವಲ್ಪಹೊತ್ತು ಕದಲಲಾರದೆ ಹೋಯಿತು.

ಸಿಂಹವು ಹಾಗೆ ಹಾರಿದುದನ್ನು ಹೇಗೆ ಅರ್ಥಮಾಡಿಕೊಳ್ಳಬೇಕೆಂದು ಕತ್ತೆಗೆ ತಿಳಿಯಲಿಲ್ಲ. ಅದು ಸಿಂಹವೆಂದೂ ಅದಕ್ಕೆ ಗೊತ್ತಾಗಲಿಲ್ಲ. ಏನೋ ಇದ್ದಕ್ಕಿದ್ದ ಹಾಗೆ ತನ್ನ ಹತ್ತಿರ ಸಿಡಿಲುಬಿದ್ದ ಹಾಗಾಗಿ. ಭೀತಿಯಿಂದ ಅದರ ಬುದ್ಧಿಮಂಕಾಯಿತು. ಆ ಕ್ಷಣವೇ ಅಲ್ಲಿಂದ ಹಿಂದಿರುಗಿ ಓಡುತ್ತ ಒಂದುಸಾರಿ ಅದು ತಿರುಗಿನೋಡಿದಾಗ, ಭಯಂಕರ ರೀತಿಯಲ್ಲಿ, ಕ್ರೂರವಾದ ಕೋರೆ ಹಲ್ಲುಗಳಿಂದ. ಕೆಂಪಗಿನ ಕಣ್ಣುಗಳಿಂದ ಯಾವುದೋ ಮೃಗ ತನ್ನನ್ನು ನೋಡುವಂತೆ ಕಾಣಲು, ಅದು ಗ್ರಾಮಗಳ ಕಡೆಗೆ ಓಡಿತು. ಕಣ್ಣು ಕತ್ತಲೆ ಬಂದಂತಾದ ಸಿಂಹ ಅದನ್ನು ಬೆನ್ನಟ್ಟಲಾಗದೆ ಸುಮ್ಮನೆ ನೋಡಿತು. ಅಷ್ಟೇ. ಕೈಗೆ ಬಂದು ಬಾಯಿಗೆ ಬಾರದೆ ಹೋಯಿತಲ್ಲಾ !

ನರಿ ಸಿಂಹವನ್ನು ನೋಡಿ. “ಏನಿದು ? ನಿನ್ನ ಪ್ರತಾಪ ಚುರುಕುತನವೆಲ್ಲಾ ಎಷ್ಟರಮಟ್ಟಿನದೆಂದು ಈ ದಿನ ನೋಡಿಬಿಟ್ಟೆ” ಎಂದಿತು.

“ಹಾರಲು ನಾನು ಪೂರ್ತಿ ಸಿದ್ಧನಾಗಿರಲಿಲ್ಲ. ಅದರ ಜತೆಗೆ ಆಕಸ್ಮಿಕವಾಗಿ ಉಂಟಾದ ಸಂತೋಷದಿಂದ ಬುದ್ಧಿ ಮಣ್ಣು ತಿಂದಿತು. ಏನು ಮಾಡಲಿ ? ನಾನು ನಿಜಕ್ಕೂ ಸಿದ್ಧನಾಗಿರುತ್ತಿದ್ದರೆ ಆನೆಯನ್ನಾದರೂ ತಪ್ಪಿಹೋಗಲು ಬಿಡುತ್ತಿದ್ದೆನೇ ? ನಿನಗೆ



ಗೊತ್ತಿಲ್ಲವೆ ?" ಎಂದು ಕೇಳಿತು ಸಿಂಹ. "ಹಾಗಾದರೆ ಈಗಿನಿಂದಲೇ ಸಿದ್ಧನಾಗಿರು. ನಾನು ಮತ್ತೆ ಅದನ್ನು ಕರೆದು ತರುತ್ತೇನೆ" ಎಂದಿತುನರಿ.

"ಅದು ಹೇಗೆ ಮಿತ್ರಾ? ಅದು ನನ್ನನ್ನು ಕಣ್ಣಾರೆ ನೋಡಿ ಓಡಿಹೋಯಿತು. ಮತ್ತೆ ಕರೆದರೆ ಬರುತ್ತದೇನು ? ಬೇರೆ ಯಾವುದಾದರೂ ಮೃಗವನ್ನು ನನಗಾಗಿ ಹೇಗಾದರೂ ಮಾಡಿ ಕರೆದುಕೊಂಡು ಬಾ" ಎಂದಿತು ಸಿಂಹ.

"ಅದರ ಚಿಂತೆ ನಿನಗೆ ಬೇಡ. ಅದೆಲ್ಲಾ ನಾನು ನೋಡಿಕೊಳ್ಳುತ್ತೇನೆ" ಎಂದು ಹೇಳಿ ನರಿ, ಕತ್ತೆ ಓಡಿದ ದಾರಿಯಲ್ಲೇ ಓಡಿ, ಆ ಕತ್ತೆ ಮೊದಲಿನ ಕೆರೆಯ ಬದಿಯಲ್ಲೇ ಹುಲ್ಲು ಮೇಯುವುದನ್ನು ನೋಡಿತು. ಬೇಗಬೇಗನೆ ಅದರ ಹತ್ತಿರ ಹೋಗಿ, "ಹೀಗೆ ಓಡಿ ಬಂದೆಯಲ್ಲ ಮಾವಾ ? ಏನಾಯಿತು ನಿನಗೆ ?" ಎಂದು ಕೇಳಿತು ನರಿ. "ನೋಡಪ್ಪಾ ಅಳಿಯಾ ! ನೀನೇನೋ ನನ್ನನ್ನು ಆ ಒಳ್ಳೆಯ ಪ್ರದೇಶಕ್ಕೆ ನನ್ನನ್ನು ಕರೆದುಕೊಂಡು ಹೋದೆ. ನನಗೆ ಅಬ್ಬಬ್ಬಾ ! ಯಾವ ಭೂತವೋ ನನ್ನ ಮೇಲಿಂದಾಗಿ ಹಾರಿತಲ್ಲಾ ! ಕೂದಲೆಳೆಯಲ್ಲಿ ಸಾವು ತಪ್ಪಿತಪ್ಪಾ" ಎಂದಿತು ಕತ್ತೆ.

ನರಿ ಗಲಗಲನೆ ನಕ್ಕು, "ಮಾವಾ, ನಾನು ಹೇಳಿದ ಹೆಣ್ಣು ಕತ್ತೆಗಳಲ್ಲಿ ಅದೊಂದು. ಸುಖವಾಗಿ ಬೆಳೆದು ಗುರುತು ತಿಳಿಯದಷ್ಟು ಪುಷ್ಟಿಯಾಗಿದೆ ಅದು. ಚೆಂದಾಗಿ ಅಲಂಕಾರ ಮಾಡಿಕೊಂಡು ಗಂಡನಿಗಾಗಿ ಎದುರುನೋಡುತ್ತ, ಉಳಿದೆರಡು ಕತ್ತೆಗಳಿಗಿಂತ ಮುಂದಾಗಿ, ನಿನ್ನನ್ನು ಆಲಿಂಗಿಸಿಬಿಡಬೇಕು ಅಂತ ಕೈಚಾಚಿ ನಿನ್ನ ಮೇಲೆ ಹಾರಿ ನಿನ್ನನ್ನು ದಾಟಿ ಆಚೆಗೆ ಬಿತ್ತು. ನೀನು ಪುಕ್ಕಲು ಹಿಡಿದು ಓಡಿ ಬಂದು ಬಿಟ್ಟೆ. ನಿಜವಾಗಿ ನಡೆದದ್ದು ಇದೇ. ನಿನ್ನ ಪ್ರವರ್ತನೆಗೆ ನೀನು ನಾಚಿಕೆ ಪಡಬೇಕು. ಹೋಗಲಿಬಿಡು, ಪುನಃ ಬಾ. ಅದು ಪಾಪ, ನಿನಗಾಗಿ ತಿಂಡಿತೀರ್ಥ ಬಿಟ್ಟು, ಲಂಬಕರ್ಣನು ತನ್ನ ಗಂಡನಾಗದಿದ್ದರೆ ನೀರಲ್ಲಿಯೋ ಬೆಂಕಿಯಲ್ಲಿಯೋ, ವಿಷ ತೆಗೆದುಕೊಂಡೋ ಸಾಯುವೆನೆಂದು ಪ್ರಲಾಪಿಸಿಕೊಂಡಿದೆ. ನಿಷ್ಕಾರಣವಾಗಿ ಒಬ್ಬಳು ಹೆಣ್ಣು ಪ್ರಾಣಕಳೆಕೊಳ್ಳುವ ಹಾಗೆ ಮಾಡಬೇಡಯ್ಯ. ಮಹಾಪಾಪ ! ಮನ್ಮಥನು ಕೂಡಾ ನಿನ್ನನ್ನು ಕ್ಷಮಿಸಲಾರ. ಮುಂದೆ ನಿನಗೆ ಯಾವ ಜತೆಯೂ ಸಿಗಲಾರದು. ಹೆಣ್ಣಾದವಳನ್ನು ತೃಣೀಕರಿಸಿ, ಮನ್ಮಥನ ಕೋಪಕ್ಕೆ ಪಾತ್ರರಾದವರು ಕಡೆಗೆ ಬೈರಾಗಿಯಾಗಿ, ಜುಟ್ಟುಜಡೆಗಟ್ಟಿ, ಕೆಂಪುವಸ್ತ್ರ ಉಟ್ಟುಕೊಂಡು ಕೈಯಲ್ಲಿ ಕಪಾಲ ಹಿಡಿದು ತಿರುಗುತ್ತಾರಂತೆ" ಎಂದಿತು.

ನರಿಯು ಮಾತುಗಳನ್ನು ನಂಬಿ, ಬುದ್ಧಿಯಿಲ್ಲದ ಕತ್ತೆ ಅದರ ಹಿಂದೆ ಹೊರಟಿತು. ವಿಧಿ ತಳ್ಳುತ್ತಾ ಇರುವಾಗ ವಿವೇಕಿಗೆ ಸಹಾ ಬುದ್ಧಿ ಸ್ಥಗಿತವಾಗುವುದೆಂದು ಹೇಳುತ್ತಾರೆ. ಈಸಾರಿ ಕತ್ತೆ ಏನೂ ಹೆದರದೆ ನರಿಯ ಹಿಂದೆ ತಕ್ಕಷ್ಟು ಅಳವಿಗೆ ಬಂದ ಕೂಡಲೇ

ಸಿಂಹವು ಅದರ ಮೇಲೆ ಹಾರಿ, ಉರುಳಿಸಿ ಕ್ಷಣ ಮಾತ್ರದಲ್ಲಿ ಕೊಂದುಹಾಕಿತು.

ತರುವಾಯ ಅದು ನರಿಯನ್ನು ಆ ಶವಕ್ಕೆ ಕಾವ ಲಾಗಿರಿಸಿ, ಸ್ನಾನಮಾಡಿ ಬರಲು ಸಮೀಪದಲ್ಲಿದ್ದ ನದಿಯ ಕಡೆಗೆ ಹೋಯಿತು.

ಎಷ್ಟೋ ಹೊತ್ತಿನಿಂದ ಹಸಿವೆಯನ್ನು ಸಹಿಸಿ ಕೊಂಡಿದ್ದ ನರಿಗೆ ಕತ್ತೆಯ ಗುಂಡಿಗೆಯನ್ನೂ, ಕಿವಿ ಗಳನ್ನೂ ತಿನ್ನಬೇಕೆಂಬ ಆಸೆಯನ್ನು ಹತ್ತಿಕ್ಕಿಕೊಳ್ಳ ಲಾಗದೆ, ಅವುಗಳನ್ನು ಗಬಗಬನೆ ತಿಂದುಬಿಟ್ಟಿತು.

ಸಿಂಹವು ಸ್ನಾನಮಾಡಿ ತಿರುಗಿಬಂದು: ಕತ್ತೆಯ ಕಿವಿಗಳೂ, ಗುಂಡಿಗೆಯೂ ಇಲ್ಲದಿರುವುದನ್ನು ನೋಡಿ ಕೋಪದಿಂದ "ಎಲೋ ನೀಚನರಿಯೇ! ಇಂಥಾ ಕೆಲಸ ಏಕೆ ಮಾಡಿದೆ? ನೀನು ಇದರ ಕಿವಿಗಳನ್ನೂ ಗುಂಡಿಗೆಯನ್ನೂ ತಿಂದು ನನಗೆ ನಿನ್ನ ಎಂಜಲನ್ನು ಬಿಡುವಿಯೇನು?" ಎಂದಿತು.

ನರಿ ತುಂಬಾ ವಿನಯದಿಂದ, "ಉಂಟೇ ಪ್ರಭೂ! ಹಾಗೆ ಹೇಳಬೇಡಿ. ನಾನು ನಿರಪರಾಧಿ. ಈ ಪ್ರಾಣಿಗೆ ಕಿವಿಗಳೂ ಗುಂಡಿಗೆಯೂ ಎಂದಿಗೂ ಇರಲಿಲ್ಲ. ಇರುತ್ತಿದ್ದರೆ ಒಂದುಸಾರಿ ಇಲ್ಲಿಗೆ ಬಂದು ತಮ್ಮನ್ನು ನೋಡಿ ಹೆದರಿ ಓಡಿದಂಥಾದ್ದು ಮತ್ತೆ ಇಲ್ಲಿಗೆ ಬರು ತ್ತಿತ್ತೇ? ಅದಕ್ಕೆ ಕಿವಿಗಳಿಲ್ಲದ ಕಾರಣದಿಂದಲೇ ತಮ್ಮ ಗರ್ಜನೆಯೂ, ಹಾರಿದ ಸಪ್ಪಳವೂ ಕೇಳಲಿಲ್ಲ. ಗುಂಡಿಗೆ ಇಲ್ಲದ ಕಾರಣದಿಂದಲೇ ಗುಂಡಿಗೆ ಭಯವೂ ಅದಕ್ಕಿಲ್ಲ. ಏನೋ ಅದರ ಕಣ್ಣಿಗೆ ನಿಮ್ಮ ಪಾದ ಧೂಳಿಬಿದ್ದು ಓಡಿ ಹೋಯಿತು ಅಷ್ಟೇ. ಅದು ಮೊದಲು ಬಂದು ಓಡಲಿಕ್ಕೂ, ಪುನಃ ಈಗ ಬರ ಲಿಕ್ಕೂ ಪ್ರತ್ಯೇಕ ಕಾರಣ ಏನೂ ಇಲ್ಲ. ಮತ್ತೊಂದು ಸಾರಿ ಕರೆದರೆ ಬರುತ್ತದೆಂದು ನನಗೆ ಮೊದಲೇ ಗೊತ್ತಿತ್ತು" ಎಂದಿತು.

ಸಿಂಹವು ನರಿಯ ಮಾತು ನಂಬಿ, ಕತ್ತೆಯನ್ನು ತಿನ್ನು ವಾಗ ಅದರೊಂದಿಗೆ ನರಿಯೂ ಇನ್ನಿಷ್ಟು ತಿಂದಿತು.



ಹೀಗೆ ಕೋತಿ ಮೊಸಳೆಗೆ ಲಂಬಕರ್ಣ ಕತ್ತೆಯ ಕತೆಯನ್ನು ಹೇಳಿ, "ಮೂರ್ಖನೇ, ನೀನು ನನ್ನನ್ನು ಮೋಸಪಡಿಸಿ ಗೆದ್ದೆನೆಂದುಕೊಳ್ಳಬೇಡ. ತಿರುಗಿ ಕೇಳಿ ದರೆ ನೀನು ಬುದ್ಧಿಗೇಡಿಯೇ ನಿಜ. ಯುಧಿಷ್ಠಿರ ನೆಂಬ ಕುಂಬಾರನ ಹಾಗೆ ಬಾಯಿ ಜಾರಿ ನಿಜ ಸಂಗತಿ ಹೇಳಿಬಿಟ್ಟಿರುವಿ. ತನ್ನ ಮಾಯೋಪಾಯಗಳ ಜಾಲದ ನಡುವೆ ನಿಜ ಹೇಳುವ ಮೂರ್ಖನು ಯುಧಿಷ್ಠಿರನ ಹಾಗೇ ಕಷ್ಟಗಳಿಗೆ ಬೀಳುವನು" ಎಂದಿತು.

"ಅದೇನು ಕಥೆ?" ಎಂದು ಮೊಸಳೆ ಕೇಳಲು, ಕೋತಿ "ಸರಿ, ಬೇಕಾದರೆ ಕೇಳು" ಎಂದು ಆ ಕಥೆ ಯನ್ನು ಹೀಗೆ ಹೇಳಿತು:

### ಕುಂಬಾರವೀರನ ಕಥೆ

ಒಂದು ದಿನ ಒಬ್ಬ ಕುಂಬಾರನು ಮಿತಿಮೀರಿ ಕುಡಿದು, ಅಡ್ಡಾದಿಡ್ಡಾ ಓಡುತ್ತ ಬಂದು ತನ್ನ ಮನೆಯ ಅಂಗಳದಲ್ಲಿ ಬಿದ್ದುಬಿಟ್ಟನು. ಆಗ ಗಡಿ.

ಗೆಯ ಚೂರೊಂದು ಅವನ ಹಣೆಗೆ ಚುಚ್ಚಿ ದೊಡ್ಡ ಗಾಯವಾಗಿ ತುಂಬಾ ರಕ್ತ ಸುರಿಯಿತು. ಸರಿಯಾದ ಚಿಕಿತ್ಸೆ ನಡೆಯದೆ, ಕೀವುಗಟ್ಟಿ ಗುಣವಾಗಲಿಕ್ಕೆ ಬಹಳ ಕಾಲ ಹಿಡಿಯಿತು.

ಗಾಯವು ವಾಸಿಯಾದ ಮೇಲೆ ಕೂಡಾ ಗಾಯಕ್ಕೆ ಸಂಬಂಧಿಸಿದ ಕಪ್ಪು ಮಚ್ಚೆಯೊಂದು ಅವನ ಹಣೆಯಲ್ಲಿ ಶಾಶ್ವತವಾಗಿತ್ತು.

ಮತ್ತೆ ಕೆಲವು ತಿಂಗಳಲ್ಲಿ ಆ ಕುಂಬಾರನಿರುವ ಪ್ರಾಂತದಲ್ಲಿ ಮಳೆ ಬೀಳದೆ ಬರಗಾಲ ಬಂತು. ಆದುದರಿಂದ ಕುಂಬಾರನು ಹೊಟ್ಟೆಪಾಡಿಗಾಗಿ ತನ್ನ ದೇಶವನ್ನು ಬಿಟ್ಟು, ದೂರಪ್ರಾಂತಕ್ಕೆ ಹೋಗಿ, ಒಬ್ಬ ರಾಜನ ಹತ್ತಿರ ಏನಾದರೊಂದು ಸೇವೆಗೆ ಸೇರಲು ಹವಣಿಸಿದನು.

ಆ ರಾಜನು ಅವನ ಹಣೆಯ ಮೇಲಿರುವ ಭಯಂಕರವಾದ ಮಚ್ಚೆಯನ್ನು ನೋಡಿ, ತಲೆದೂಗುತ್ತ ತನ್ನೊಳಗೆ, "ಇವನು ದೊಡ್ಡ ವೀರನಾಗಿರಬೇಕು. ಯುದ್ಧದಲ್ಲಿ ಹಿಂಜರಿಯದೆ ವೀರೋಚಿತವಾಗಿ ಹೋರಾಡುತ್ತ, ಶತ್ರುವಿನ ಕೈಯ ಕತ್ತಿಯ ಪೆಟ್ಟಿನಿಂದ ಈ ಗಾಯವಾಗಿದೆಯೇ ಹೊರತು, ಆ ಮಚ್ಚೆಗೆ ಬೇರೆ ಕಾರಣವೇನಿಲ್ಲ. ಇವನು ಹೋರಾಟದಲ್ಲಿ ಬೆನ್ನು ತೋರಿಸುವವನಲ್ಲ. ಇವನು ನಮ್ಮ ಹತ್ತಿರ ಇರಲು ತಕ್ಕವನೇ ನಿಜ" ಎಂದುಕೊಂಡು ಕುಂಬಾರನಿಗೆ ತನ್ನ ಸೇನೆಯಲ್ಲಿ ಒಳ್ಳೆಯದಾದ ಒಂದು ಪದವಿಯನ್ನು ಕೊಟ್ಟು, ಬಹುಮಾನಗಳನ್ನೂ ಕೊಟ್ಟು ಗೌರವಿಸಿದನು.

ರಾಜನು ಅವನ ಮೇಲೆ ತೋರಿಸಿದ ಪ್ರತ್ಯೇಕವಾದ ಅಭಿಮಾನವು ಇತರ ರಾಜಪುತ್ರ ಯೋಧರಿಗೆ ಹಿಡಿಸಲಿಲ್ಲ. ಅವರು ಕುಂಬಾರನ ಮೇಲೆ ಅಸೂಯೆಪಟ್ಟರೇ ಹೊರತು ಬಹಿರಂಗವಾಗಿ ಏನೂ ಹೇಳಲಿಲ್ಲ. ಏಕೆಂದರೆ ರಾಜನಿಗೆ ಕೋಪ ಬಂದೀತು ಎಂಬುದು ಒಂದು ಕಾರಣ. ಅವನು ನಿಜಕ್ಕೂ ದೊಡ್ಡ ರಾಜಪುತ್ರವೀರನೇ ಎಂಬ ನಂಬುಗೆ ಇನ್ನೊಂದು ಕಾರಣ.

ಮುಂದೆ ಬೇಗದಲ್ಲಿಯೇ ಆ ರಾಜನಿಗೆ ಶತ್ರುರಾಜನೊಂದಿಗೆ ಯುದ್ಧಮಾಡಬೇಕಾದ ಪ್ರಸಂಗ ಬಂದಿತು. ಆನೆಗಳನ್ನೂ ಕುದುರೆಗಳನ್ನೂ ಯುದ್ಧಕ್ಕೆ ಸಿದ್ಧಗೊಳಿಸಿ, ಯುದ್ಧರಂಗಕ್ಕೆ ಕಳುಹಿಸುವ ಯೋಧರನ್ನೂ ಆರಿಸತೊಡಗಿದರು. ಈ ಸಂದರ್ಭದಲ್ಲಿ ರಾಜನು ತನ್ನ ಸೈನಿಕವೀರರನ್ನು ನೋಡುತ್ತಾ, ಮಾತಾಡಿಸುತ್ತಾ ಬಂದು, ಕುಂಬಾರನನ್ನು ನೋಡಿ, "ಓ ರಜಪುತ್ರವೀರನೇ, ನಿನ್ನ ಹೆಸರೇನು ? ಯಾವ ಕುಲ ? ನಿನ್ನ ಹಣೆಯ ಮೇಲಿರುವ ಆ ಭಯಂಕರವಾದ ಗಾಯ ಯಾವ ಯುದ್ಧದಲ್ಲಿ ಉಂಟಾಯಿತು ?" ಎಂದು ಕೇಳಿದನು.





# ಪಾಪಾತ್ಮನ ಪುಣ್ಯ

ಶಠಂ ಪ್ರತಿಶಾಠ್ಯಂ ಎಂಬಂತೆ ರಾಜಾ ತ್ರಿವಿಕ್ರಮನು ಮತ್ತೆ ಮರದಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೆ ಹಾಕಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವ ದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೆ, ನೀನು ಎಂಥದೋ ಒಂದು ಪಾಪವನ್ನು ಮಾಡಿ, ಅದರ ಪರಿಹಾರಕ್ಕಾಗಿ ಹೀಗೆ ಶ್ರಮಪಡುವುದನ್ನೇ ನಿಯಮವಾಗಿ ಇಟ್ಟು ಕೊಂಡಿರುವೆಯೆಂದು ಕಾಣುತ್ತದೆ. ಏಕೆಂದರೆ ಆ ರೀತಿಯಲ್ಲಿ ಪಾಪಗಳನ್ನು ಪರಿಹಾರ ಮಾಡಿಕೊಳ್ಳುವು ದಕ್ಕೆ ನಿದರ್ಶನವಾಗಿ ನನಗೆ ಶರಭಯ್ಯನ ಕಥೆ ನೆನಪಿಗೆ ಬರುತ್ತದೆ. ದಾರಿಯ ಶ್ರಮ ತಿಳಿಯದಂತೆ ನಿನಗೆ ಆ ಕಥೆಯನ್ನು ಹೇಳುತ್ತೇನೆ, ಕೇಳುತ್ತಾ ನಡೆ" ಎಂದು ಹೀಗೆ ಕಥೆಯನ್ನು ಹೇಳತೊಡಗಿತು :

ಬಹಳ ಕಾಲದ ಹಿಂದೆ ಒಬ್ಬ ಕೋಟೀಶ್ವರನ ಮಗನಾಗಿ ಹುಟ್ಟಿದವನು ಶರಭಯ್ಯ. ತಂದೆಯ ಅನಂತರ ತಂದೆಯ ಸೊತ್ತಿಗೆಲ್ಲಾ ಅವನೇ ಒಡೆಯ ನಾಗಿ, ಹಣದಿಂದ ಸಾಧಿಸಲಾಗುವ ಸುಖಸಂತೋಷ

ಬೇತಾಳಕಥೆಗಳು...

ಗಳನ್ನು ಮನದಣಿಯೆ ಅನುಭವಿಸಿದನು. ಅಷ್ಟು ಮಾತ್ರವಲ್ಲದೆ ಸುಖಸಂತೋಷಗಳಿಗಾಗಿ ಅನಂತ ಪಾಪಗಳನ್ನೂ ಮಾಡಿದನು. ಅವನು ಮಾಡಿದ ಅನ್ಯಾಯಗಳಿಗೆ ಲೆಕ್ಕವಿರಲಿಲ್ಲ.

ಹೀಗೆ ಸುಖಲೋಲನಾಗಿ, ದೈವಭೀತಿ ಇಲ್ಲದವನಾಗಿ ಬದುಕಿದ ಶರಭಯ್ಯ ನಡುವಯಸ್ಸು ದಾಟಿ ವಾರ್ಧಕ್ಯವು ತನ್ನನ್ನು ಕವಿಯುವ ವಯಸ್ಸಿಗೆ ಮುಟ್ಟಿದನು. ಆಗ ಅವನಿಗೆ ತಾನು ಕಳೆದ ಜೀವಿತವನ್ನು ಕುರಿತು ಯೋಚನೆ ಬಂದು, ತುಂಬಾ ಪಶ್ಚಾತ್ತಾಪವಾಗತೊಡಗಿತು. ಎಷ್ಟೊಂದು ಅಸಮರ್ಥನಾದವನು ಕೂಡಾ ಜೀವನಕಾಲದಲ್ಲಿ ಅನೇಕ ಒಳ್ಳೆಯ ಕೆಲಸಗಳನ್ನು ಮಾಡಿ ಅಷ್ಟೋ ಇಷ್ಟೋ ಪುಣ್ಯ ಸಂಪಾದಿಸುತ್ತಾನೆ. ಶರಭಯ್ಯನು ತನ್ನ ಗತ ಜೀವಿತವನ್ನು ಎಣಿಸಿ ನೋಡುವಾಗ ತಾನು ಒಂದೇ ಒಂದು ಪುಣ್ಯಕಾರ್ಯ ಮಾಡಿದಂತೆ ಕಾಣಲಿಲ್ಲ. ಎಳ್ಳಿನಷ್ಟು ಪುಣ್ಯಮಾಡಿದವನಲ್ಲ ತಾನು ! ಇದ್ದಕ್ಕಿದ್ದ ಹಾಗೆ ಶರಭಯ್ಯನ ಗುಣ ಬದಲಾವಣೆ ಹೊಂದಿತು. ಸುಖಸಂತೋಷಗಳ ಮೇಲೆ ಅವನಿಗೆ ವಿರಕ್ತಿಯುಂಟಾಯಿತು. ತನ್ನ ಉಳಿದ ಜೀವನವನ್ನೆಲ್ಲಾ ದಾನಧರ್ಮ ಮೊದಲಾದ ಪುಣ್ಯ ಕಾರ್ಯಗಳಿಗೇ ವಿನಿಯೋಗಿಸಲಾಗಿಡುವುದೆಂದು ನಿಶ್ಚಯಿಸಿಬಿಟ್ಟನು.

ಮೊದಲು ಶರಭಯ್ಯನ ಮೇಲೆ ದುರಭಿಪ್ರಾಯಗೊಂಡು ದ್ವೇಷಿಗಳಾಗಿದ್ದವರು ಕೂಡ. ಅವನಲ್ಲಿಯ ಬದಲಾವಣೆಯನ್ನು ನೋಡಿ ಅವನನ್ನು ದೇವರಂತೆ ನೋಡ ತೊಡಗಿದರು. ಅವನ ದಾನಗುಣವು ದಾನ ಪಡೆಯುವವರಾದ ಬಡ ಜನರನ್ನು ಕೂಡ ಆಶ್ಚರ್ಯ ಚಕಿತ ಗೊಳಿಸುವಂತಿತ್ತು. ಆದರೆ ಶರಭಯ್ಯನ ಮಕ್ಕಳೂ ಹೆಂಡತಿಯೂ ಶರಭಯ್ಯನಿಗೆ ಬುದ್ಧಿ ಕೆಟ್ಟುಹೋಯಿತೆಂದುಕೊಂಡರು. ಅವನು ದಾನ ಧರ್ಮಗಳಿಂದ ಬೇಗದಲ್ಲಿಯೇ ಇರುವುದನ್ನೆಲ್ಲಾ ಖರ್ಚುಮಾಡಿ ತಮ್ಮ ಕೈಯಲ್ಲಿ ಕರಟ ಕೋಲು ಕೊಡುವನೆಂದು ಭಯಪಟ್ಟು, ತಮ್ಮ ಭಾಗಗಳನ್ನು ಪಾಲುಮಾಡಿಕೊಡುವಂತೆ ಕೇಳಿದರು. ಅದಕ್ಕೇನೂ ತಡೆ ಹೇಳದೆ ಶರಭಯ್ಯ ಹಾಗೇ ಮಾಡಿದನು. ತನ್ನ



ಪಾಪಗಳು ಪರಿಹಾರವಾಗ ಬೇಕಾದರೆ ತನ್ನ ಸ್ವಂತ ಹಣದಿಂದಲೇ ಪರಿಹಾರವಾಗ ಬೇಕಾಗಿತ್ತು.

ಪಾಲಿನಲ್ಲಿ ತನಗೆ ಸಿಕ್ಕಿದ ಆಸ್ತಿಯನ್ನೆಲ್ಲಾ ಶರಭಯ್ಯ ದಾನಧರ್ಮಗಳಿಂದ ಬೇಗನೇ ಖರ್ಚು ಮಾಡಿಬಿಟ್ಟನು. ಕಟ್ಟಕಡೆಗೆ ತನ್ನ ಮನೆಯನ್ನು ಸಹಾ ಮಾರಿ ದಾನ ಧರ್ಮ ಮಾಡಿ ಬೀದಿಗೆ ಬಿದ್ದು ತೀರ್ಥಯಾತ್ರೆಗೆ ಹೊರಟನು. ಹೀಗೆಯೇ ತನ್ನ ಶೇಷ ಜೀವಿತವನ್ನು ಕಳೆಯಬೇಕೆಂದು ನಿಶ್ಚಯಿಸಿದ್ದನು.

ಅವನು ಅರಣ್ಯ ಮಾರ್ಗದಲ್ಲಿ ಹೋಗುತ್ತಿರುವಾಗ. ಒಂದುಕಡೆ ಒಬ್ಬ ಬ್ರಹ್ಮರಾಕ್ಷಸನು ದಾರಿಗೆ ಅಡ್ಡವಾಗಿ ನಿಂತು. "ಅಯ್ಯಾ, ನಿನ್ನನ್ನು ನೋಡಿದರೆ ತುಂಬಾ ಒಳ್ಳೆಯವನ ಹಾಗೆ ಕಾಣುತ್ತಿರುವೆ. ನನಗೆ ಒಂದು ಉಪಕಾರ ಮಾಡಬಲ್ಲೆಯಾ?" ಎಂದು ಕೇಳಿದನು. ಶರಭಯ್ಯ ಬ್ರಹ್ಮರಾಕ್ಷಸನನ್ನು ನೋಡಿ ಹೆದರದೆ, "ಏನು ಉಪಾಕಾರ ನಾನು ಮಾಡಬಲ್ಲೆ ನಿನಗೆ?" ಎಂದು ಕೇಳಿದನು. "ನಾನೊಬ್ಬ ಮಹಾ ಪಾಪಿ. ಹೇಳಕೂಡದಷ್ಟು ಪಾಪಗಳನ್ನು ಮಾಡಿ. ಹೀಗೆ ಬ್ರಹ್ಮರಾಕ್ಷಸನಾಗಿ ಅಲೆದಾಡಿಕೊಂಡಿದ್ದೇನೆ. ನೀನು ನನಗೆ ನಿನ್ನ ಪುಣ್ಯವನ್ನು ದಾನ ಮಾಡಿದೆಯಾದರೆ. ನನಗೆ ಮುಕ್ತಿ ದೊರೆಯುತ್ತದೆ" ಎಂದ ಬ್ರಹ್ಮರಾಕ್ಷಸ.

"ಹಾಗೆಯೇ ಮಾಡುತ್ತೇನೆ. ಹಿಡಿ!" ಎಂದು ಶರಭಯ್ಯ ತನ್ನ ಪುಣ್ಯವನ್ನೆಲ್ಲಾ ಬ್ರಹ್ಮರಾಕ್ಷಸನಿಗೆ ಧಾರೆಯೆರೆದುಕೊಟ್ಟನು.

ಆದರೆ ಬ್ರಹ್ಮರಾಕ್ಷಸನ ರೂಪ ಇದ್ದ ಹಾಗೆಯೇ ಇದ್ದಿತು. ಅದನ್ನು ನೋಡಿ ಬ್ರಹ್ಮರಾಕ್ಷಸನು ನಿರಾಶೆಯಿಂದ. "ನಿನಗೆ ಪುಣ್ಯವಿದ್ದರಲ್ಲವೇ ನನಗೆ ಧಾರೆ ಎರೆದುಕೊಡಲಿಕ್ಕೆ?" ಎಂದು ಶರಭಯ್ಯನನ್ನು ಹೀಯಾಳಿಸಿದನು.

ಆಗಲೇ ಆ ಪ್ರದೇಶವು ಪ್ರಕಾಶಮಾನವಾಗಿ ಅಂತರಿಕ್ಷದಿಂದ ದೇವತಾ ವಿಮಾನವೊಂದು ಅವರ ಸಮೀಪದಲ್ಲಿ ಇಳಿದು ನಿಂತಿತು. ತನಗೇ ಬಂದಿತೆಂದು ಕೊಂಡು ಬ್ರಹ್ಮರಾಕ್ಷಸನು ಆ ವಿಮಾನದಲ್ಲಿ ಏರಲು ನೋಡಿದನು. ಆದರೆ ದೇವಸಾರಥಿ ಬ್ರಹ್ಮರಾಕ್ಷಸ



ನನ್ನು ಹಿಂದಕ್ಕೆ ದೂಡಿ ಶರಭಯ್ಯನನ್ನು ವಿಮಾನದಲ್ಲಿ ಏರಿಸಿಕೊಂಡನು. ಬ್ರಹ್ಮರಾಕ್ಷಸನು ನೋಡುತ್ತಿದ್ದಂತೆಯೇ ವಿಮಾನವು ಆಕಾಶದ ಮೇಲೆ ಹೊರಟು ಹೋಗಿಬಿಟ್ಟಿತು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜನೇ, ಇದರಲ್ಲಿ ನನಗೆ ಸಂದೇಹ ಕಾಣುತ್ತಿದೆ. ತನಗಿರುವುದನ್ನೆಲ್ಲಾ ದಾನಧರ್ಮಗಳಿಗೆ ಖರ್ಚು ಮಾಡಿದ ಶರಭಯ್ಯನಿಗೆ ಪುಣ್ಯವಿಲ್ಲದೆ ಹೋಗಲು ಕಾರಣವೇನು ? ಪುಣ್ಯವಿರುತ್ತಿದ್ದರೆ ಬ್ರಹ್ಮರಾಕ್ಷಸನಿಗೆ ಮುಕ್ತಿಬರಬೇಕಿತ್ತಷ್ಟೆ ? ಹಾಗಾದರೆ ಶರಭಯ್ಯನ ದಾನಧರ್ಮಗಳು ಅವನು ಮಾಡಿದ ಪಾಪ ಕಾರ್ಯಗಳಿಗೆ ಪರಿಹಾರವಾಗಲಿಕ್ಕಷ್ಟೇ ಸರಿಹೋಯಿತೇನು ? ಅಥವಾ ಅವನು ಪುಣ್ಯ ಸಂಪಾದಿಸಬೇಕೆಂಬ ಸ್ವಾರ್ಥದಿಂದ ಮಾಡಿದ ದಾನಧರ್ಮಗಳೆಂಬ ಕಾರಣದಿಂದ ಹಾಗಾಯಿತೆ ? ಏನಾದರೂ ಬ್ರಹ್ಮರಾಕ್ಷಸನಿಗೆ ಮುಕ್ತಿ ಬರಿಸಲಾಗದೆ ಹೋದ ಶರಭಯ್ಯ ದೇಹದೊಂದಿಗೆ ಸ್ವರ್ಗಕ್ಕೆ ಹೋಗುವುದೆಂದರೆ ಎಂಥ ವಿಚಿತ್ರ ! ಈ ಸಂದೇಹಗಳಿಗೆ ತಕ್ಕ ಸಮಾಧಾನ ತಿಳಿದೂ ಹೇಳದೆ ಹೋದರೆ ನಿನ್ನ ತಲೆ ಪುಡಿಪುಡಿಯಾಗುತ್ತದೆ" ಎಂದು ಸುಮ್ಮನಾಯಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಶರಭಯ್ಯ ಪುಣ್ಯ ಸಂಪಾದಿಸಲಿಲ್ಲವೆಂದು ತಿಳಿಯುವುದು ಸರಿಯಲ್ಲ. ಅವನು ತನ್ನ ಗತಜೀವಿತವನ್ನು ಕುರಿತು ಪಶ್ಚಾತ್ತಾಪಪಡತೊಡಗಿದ ಕ್ಷಣದಿಂದಲೇ ಎಷ್ಟೋ ಪುಣ್ಯ ಸಂಪಾದಿಸಿದ್ದಾನೆ. ಅವನಲ್ಲಿ ಯಾವ ಕೋಶದಲ್ಲಿಯೂ ಸ್ವಾರ್ಥದ ಲವಲೇಶವೂ ಇಲ್ಲ. ಹಾಗೇನಾದರೂ ಇದ್ದಿದ್ದರೆ ತನ್ನ ಹೆಂಡತಿ ಮಕ್ಕಳ ಭಾಗವನ್ನು ಕೂಡಾ ತನ್ನ ಪುಣ್ಯಕ್ಕಾಗಿ ಖರ್ಚು ಮಾಡುತ್ತಿದ್ದನು. ಅದಕ್ಕಿಂತ ಒಳ್ಳೆಯ ನಿದರ್ಶನವೇನೆಂದರೆ, ತನ್ನ ಹಾಗೆಯೇ ಪಾಪಗಳನ್ನು ಮಾಡಿ, ತನಗಿಂತಲೂ ದಾರುಣವಾಗಿ ಬ್ರಹ್ಮರಾಕ್ಷಸ ಜನ್ಮಪಡೆದವನ ಮುಕ್ತಿಗಾಗಿ ತನ್ನ ಪುಣ್ಯವನ್ನೆಲ್ಲಾ ಧಾರೆಯೆರೆದುಕೊಟ್ಟಿದ್ದಾನೆ. ಆದರೆ ಬ್ರಹ್ಮರಾಕ್ಷಸನಲ್ಲಿ ಹಾಳಾದ ಸ್ವಾರ್ಥವಿದ್ದುದರಿಂದ ಶರಭಯ್ಯನೊಂದಿಗೆ ಹೋಲಿಸಿದರೆ ಮಹಾ ಹೀನನೇ ಸರಿ. ಆದುದರಿಂದಲೇ ಅವನು ಇನ್ನೊಬ್ಬರ ಪುಣ್ಯದಿಂದ ತನಗೆ ಮುಕ್ತಿ ಸಿಗಬೇಕೆಂದುಕೊಂಡನು. ಆದರಿಂದಲೇ ಅವನ ಬಯಕೆ ನೆರವೇರದೆ ಬ್ರಹ್ಮರಾಕ್ಷಸನಾಗಿಯೇ ಇರುವಂತಾಯಿತು. ಸ್ವಲ್ಪವೂ ಸ್ವಾರ್ಥವಿಲ್ಲದ ಶರಭಯ್ಯನಿಗಾಗಿ ದೇವತೆಗಳು ವಿಮಾನವನ್ನು ಕಳುಹಿಸಿದರೆಂದರೆ ಅದರಲ್ಲಿ ಯಾವ ವಿಚಿತ್ರವೂ ಇಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.



# ನಂಬುಗೆ ಹೋಯಿತು

**ಮ**ಣಿಪುರದ ರಾಜನಾದ ಚಂದ್ರಸೇನನಿಗೆ ಜ್ಯೋತಿಷದಲ್ಲಿ ಅಪಾರ ನಂಬುಗೆ ಇತ್ತು. ಅವನು ನೆರೆರಾಜ್ಯದ ಮೇಲೆ ಯುದ್ಧ ಮಾಡಲು ತಯಾರಾಗುತ್ತ, ಜೋಯಿಸರನ್ನು ಕರೆಯಿಸಿ, ತನ್ನ ಭವಿಷ್ಯವನ್ನು ಹೇಳಬೇಕೆಂದು ಅಪ್ಪಣೆ ಕೊಟ್ಟನು.

ಜೋಯಿಸರು ರಾಜನ ಜಾತಕವನ್ನು ಪರಿಶೀಲಿಸಿ, "ಮಹಾರಾಜರೆ, ಈ ವರ್ಷದ ಗ್ರಹಗತಿ ಶತ್ರುಗಳಿಂದ ತಮಗೆ ಅಪಜಯವನ್ನು ಸೂಚಿಸುತ್ತದೆ." ಎಂದರು.

ರಾಜನು ಯಾರಿಗೂ ಏನೂ ಹೇಳದೆ ಯುದ್ಧ ಪ್ರಯತ್ನವನ್ನು ನಿಲ್ಲಿಸಿಬಿಟ್ಟನು.

ಒಂದು ವರ್ಷ ಕಳೆಯಿತು.

ಮಂತ್ರಿ ರಾಜನಿಗೆ ಜೋಯಿಸರ ಮಾತನ್ನು ಜ್ಞಾಪಕಪಡಿಸಿ, "ಮಹಾರಾಜರೆ, ನೀವು ಜೋಯಿಸರನ್ನು ಎಂದಿಗೂ ನಂಬಬಾರದು. ಕಳೆದ ವರ್ಷ ತಮಗೆ ಶತ್ರುಗಳಿಂದ ಅಪಜಯವಿದೆಯೆಂದು ಹೇಳಿದರು. ಆದರೆ ತಾವು ಯುದ್ಧಕ್ಕೆ ಹೋಗಲೂ ಇಲ್ಲ, ಅಪಜಯವಾಗಲೂ ಇಲ್ಲ. ಅಂದಮೇಲೆ ಜೋಯಿಸರ ಮಾತಿಗೆ ಏನು ಬೆಲೆ ಬಂದಹಾಗಾಯಿತು ?" ಎಂದನು.

ಆಗಿನಿಂದ ರಾಜನಿಗೆ ಜ್ಯೋತಿಷದಲ್ಲಿ ನಂಬುಗೆ ಹೋಯಿತು.





# ಗಡಿಬಿಡಿಯುವಳು

ಒಂದು ಊರಿನಲ್ಲಿ ರಾಜಯ್ಯನೆಂಬವನು ರಾಜನ ಆಸ್ಥಾನದಲ್ಲಿ ಉದ್ಯೋಗದಲ್ಲಿದ್ದ. ಅವನ ಹೆಂಡತಿಯ ಹೆಸರು ವಿದ್ಯಾವತಿ. ವಿದ್ಯಾವತಿಯಲ್ಲಿರುವ ವಿಶೇಷವೇನೆಂದರೆ ಪ್ರತಿ ಸಣ್ಣದೊಂದು ಕೆಲಸವೂ ಅವಳ ದೃಷ್ಟಿಗೆ ಗುಡ್ಡದಂತೆ ಕಾಣುತ್ತಿತ್ತು. ಆ ಕೆಲಸವನ್ನು ನೆನೆದು ಭಯಪಡುವಳು.

ರಾಜಯ್ಯ ದಿನಾ ಬೆಳಿಗ್ಗೆ ಆಸ್ಥಾನಕ್ಕೆ ಹೊರಟು ಹೋದರೆ ಮತ್ತೆ ರಾತ್ರಿಗಷ್ಟೇ ಹಿಂದಿರುಗುವುದು. ಅವನು ಮನೆಯಿಂದ ಹೊರಟುಹೋದ ಕೂಡಲೇ ವಿದ್ಯಾವತಿ ಮನೆಯ ಬಾಗಿಲು ಹಾಕಿಕೊಂಡು ನಾಲ್ಕಾರು ಮನೆಗಳಿಗೆ ಭೇಟಿ ಕೊಟ್ಟು ಹಿರಿತನ ನಡೆಸಲು ಹೋಗಿಬಿಡುವಳು. ಅವಳೊಂದಿಗೆ ಹರಟೆ ಹೊಡೆಯುವುದೆಂದರೆ ಊರ ಹೆಂಗಸರಿಗೂ ಒಂದು ತಮಾಷೆಯ ಸಂತಸವೇ. ಹೋದಲ್ಲೆಲ್ಲಾ ಅವಳನ್ನು ಕೂಡಿಸಿಕೊಂಡು ಮಾತಾಡುವರು.

ವಿದ್ಯಾವತಿ ಒಂದು ಮನೆಯಲ್ಲಿ ಏನೋ ನಾಲ್ಕಾರು ಮಾತಾಡಿದ ಕೂಡಲೇ ಹೊರಡುವ ಆತುರ ತೋರಿಸುವಳು. "ಇರು, ಅಷ್ಟು ಅವಸರ ವೇನು?" ಅಂದರೆ, "ಹೇಗಮ್ಮಾ ಕೂಡಲಿ? ಅವರು ಬರುವ ವೇಳೆಗೆ ಅಡಿಗೆ ತಯಾರಾಗಬೇಕಲ್ಲಾ" ಎನ್ನುವಳು. ರಾತ್ರಿಯ ಅಡಿಗೆಯನ್ನು ಕುರಿತು ಬಹು ದೊಡ್ಡ ಭಾರ ತನ್ನ ಮೇಲೆ ಬಿದ್ದಿರುವಂತೆ ಮಾತಾಡುವಳು.

"ಒಂದು ಸಣ್ಣ ಅಡಿಗೆ ಮಾಡಲು ಇಷ್ಟು ಗಡಿಬಿಡಿ ಏಕಮ್ಮ? ನೀವಿಬ್ಬರು ತಾನೇ?" ಎಂದು ಒಬ್ಬಳು ಒಂದಿಷ್ಟು ಪಲ್ಯವನ್ನುಕೊಟ್ಟರೆ, ಇನ್ನೊಂದು ಮನೆಯವಳು ಒಂದಿಷ್ಟು ಚಟ್ನಿ ಪುಡಿ ಕೊಡುವಳು. ಆದರೂ ಅವಳು ತನ್ನ ಗಂಡ ಬರುವುದರೊಳಗೆ ಅನ್ನ ಮಾಡುವೆನೋ ಇಲ್ಲವೋ ಎಂದು ಹೆದರುತ್ತ ಗಾಬರಿಯಾದವಳಂತೆಯೇ ಇದ್ದು, ಗಂಡ ಮನೆಗೆ ಬಂದ ಮೇಲೆ ಅವನ ಸಹಾಯದಿಂದ ಅನ್ನ ಮಾಡುವ ಕೆಲಸ ಮುಗಿಸುವಳು.

ಯಾರಾದರೂ ಅವಳನ್ನು ತಮ್ಮ ಕೆಲಸದಲ್ಲಿ ಸಹಾಯ ಮಾಡಲು ಕರೆದರೆ, "ಅಯ್ಯೋ! ಈದಿನ ಹೇಗೆ ಬರಲಿ? ಅವರು ಅಷ್ಟು ಬಟ್ಟೆ ಒಗೀಲಿಕ್ಕೆ ಹಾಕಿದ್ದಾರಲ್ಲ?" ಎನ್ನುವಳು. ಇನ್ನೊಂದು ಸಾರಿ "ಇನ್ನೂ ಪಾತ್ರೆಗಳನ್ನು ತಿಕ್ಕುವ ಕೆಲಸ ಹಾಗೇ ಬಿದ್ದಿದೆ." ಎನ್ನುವಳು. ಮತ್ತೊಮ್ಮೆ ತನ್ನ ಆರೋಗ್ಯ

ಜಿ. ರಾಮಲಕ್ಷ್ಮಿ

ಕೆಟ್ಟ ಹಾಗೆ ನಟಿಸುವಳು. ಹೀಗೆ ಏನೋ ಒಂದು ನೆವನದಿಂದ ಅವಳು ತಪ್ಪಿಸಿಕೊಳ್ಳುವ ವಿಷಯ ಗೊತ್ತಾದುದರಿಂದ ಹರಟೇ ಪ್ರಿಯರ ಹೊರತು ಬೇರೆ ಯಾರೂ ಅವಳನ್ನು ಮಾತಾಡಿಸರು.

ರಾಜಯ್ಯನಿಗೆ ಇಬ್ಬರು ತಂಗಿಯರಿದ್ದರು. ಸುಮಾ, ರಮಾ ಎಂದು ಅವರ ಹೆಸರು. ಅವರಿಬ್ಬರೂ ಮದುವೆಯಾಗಿ ಗಂಡನ ಮನೆಗೆ ಹೋಗಿದ್ದರು. ಅವರ ಮೇಲೆ ರಾಜಯ್ಯನಿಗೆ ತುಂಬ ಪ್ರೀತಿ. ಅವರಿಗೆ ನೆಲ ಕಡಲೆಯ ಮೇಲೂ, ಅರಳಿನ ಮೇಲೂ ತುಂಬ ಇಷ್ಟ. ಅವರು ವಾಸ ಮಾಡುವ ಪ್ರದೇಶದಲ್ಲಿ ಅವೆರಡೂ ಸಿಗುತ್ತಿರಲಿಲ್ಲ.

ರಾಜಯ್ಯ ತನ್ನ ಪ್ರೀತಿಯ ತಂಗಿಯರಿಗಾಗಿ ಒಂದು ಕೊಡ ತುಂಬ ನೆಲ ಕಡೆಲೆಯನ್ನೂ, ಇನ್ನೊಂದು ಕೊಡ ತುಂಬ ಬತ್ತವನ್ನೂ ಮನೆಗೆ ತಂದು ಹಾಕಿ, "ಸುಮಾ, ರಮಾ ಬರುತ್ತಾರಂತೆ. ಅವರು ಬರುವುದರೊಳಗೆ ಈ ನೆಲಕಡಲೆಯ ಸಿಪ್ಪೆ ತೆಗೆದಿಟ್ಟು, ಬತ್ತವನ್ನು ಅರಳು ಮಾಡಿಡು. ಅವರಿಗೆ ನಿನ್ನ ಅಭಿಮಾನ, ಪ್ರೀತಿ ಕೆಲಸ ಕಾರ್ಯ ನೋಡಿ ತುಂಬ ಸಂತೋಷವಾಗುತ್ತೆ. ನೀನು ಸ್ವಲ್ಪ ಕೈಲಾಗದವಳ ಹಾಗಿದ್ದರೂ, ಅವರು ಬರುವಾಗ ಹಾಗಿರಬಾರದು." ಎಂದನು.

ವಿದ್ಯಾವತಿ ಗಂಡನ ಮಾತು ಕೇಳಿ ಒಪ್ಪಿಕೊಂಡಳಾದರೂ ಅವಳ ಗುಂಡಿಗೆಗೆ ಕಲ್ಲು ಬಿದ್ದ ಹಾಗಾಯಿತು. ಅವಳ ಮನಸ್ಸು ತುಂಬಾ ಆ ಕೆಲಸಗಳಲ್ಲೇ ತುಂಬಿ ಹೋಯಿತು. ಯಾರ ಮನೆಗೆ ಹೋದರೂ ಅವಳು, "ನಮ್ಮವರ ತಂಗೆಂದಿರು ಬರುತ್ತಾರಂತೆ, ಸುಮಾ ರಮಾ ಅಂತ, ಹಂಡೆ ತುಂಬ ನೆಲಗಡಲೇ ಸುಲೀಲಿಕ್ಕಿದೆ, ಇನ್ನೊಂದು ಹಂಡೆ ಬತ್ತ ಅರಳು ಹುರೀಬೇಕು!" ಎಂದು ಹೇಳತೊಡಗಿದಳು. ಅವಳು ಯಾರಿಗೂ ಸಹಾಯ ಮಾಡುವವಳಲ್ಲವಾದುದರಿಂದ, ಈಗ ಅವಳಿಗೆ ಯಾರ ಸಹಾಯವೂ ಸಿಗಲಿಲ್ಲ. ಅವಳು ಪ್ರತಿ ದಿನಾ ಆ ಕೆಲಸಗಳನ್ನು ಪ್ರಾರಂಭಿಸಬೇಕೆಂದು



ಅಂದುಕೊಳ್ಳುವಳು. ಆದರೆ ತೀರಾ ಆ ಕೆಲಸಕ್ಕೆ ಮೈ ಬಗ್ಗಿಸುವಾಗ, ಆ ಕೆಲಸದ ಕಷ್ಟವನ್ನು ನೆನೆದು ನಡುಗಿ ಹೋಗುವಳು. "ಅಬ್ಬ! ಎಷ್ಟಿದೆ! ಯಾವಾಗ ಮುಗಿದೀತು!" ಎಂದುಕೊಂಡು ಮನೆ ಬಾಗಿಲು ಹಾಕಿ ಹರಟೆಗೆ ಹೋಗಿಬಿಡುವಳು. ಮನಸ್ಸಿನೊಳಗಿನ ಭೀತಿಯಿಂದ ಎಲ್ಲಿಯೂ ಸ್ವಲ್ಪ ಹೊತ್ತು ಕುಳಿತುಕೊಳ್ಳಲಾರದೆ ಇನ್ನೊಂದು ಮನೆಗೆ ಎದ್ದು ಬಿಡುವಳು. ಬರಲಿರುವ ಸುಮಾ ರಮಾರೂ, ಮಾಡಲಿರುವ ಕೆಲಸಗಳೂ ಅವಳನ್ನು ಹೆದರಿಸುತ್ತಿದ್ದುವು.

ಅವರು ಬರಲಿಕ್ಕೆ ಇನ್ನೂ ಹತ್ತು ದಿನಗಳಿರುವಾಗ, ವಿದ್ಯಾವತಿ ಹರಟೆಗೆ ಹೋಗುವುದನ್ನು ನಿಲ್ಲಿಸಿಬಿಟ್ಟಳು. ಪಾಪ, ಅವಳ ಮನೆಗೆ ಬರುವವರ ನಿಮಿತ್ತದಿಂದ ಅವಳಿಗೆಷ್ಟು ಕೆಲಸವಿದೆಯೋ ಎಂದು ಎಲ್ಲರೂ ಕನಿಕರಪಡುತ್ತಿದ್ದರು. ಅವಳೊಂದಿಗೆ ಹರಟೇಹೊಡೆಯದಿದ್ದರೆ ಕೆಲವರಿಗೆ ಹೊತ್ತು ಹೋಗದು. ಅವರೇ ಅವಳನ್ನು ಕರೆಯಲಿಕ್ಕೆ

ಬಂದರು. ಆಗ ವಿದ್ಯಾವತಿ ಬಹಳ ಗಡಿಬಿಡಿಯಲ್ಲಿರುವಂತೆ ಕಾಣುತ್ತ, ಬಂದವರನ್ನು ಬಾಗಿಲಲ್ಲೇ ಮಾತಾಡಿಸಿ ಹಿಂದೆ ಕಳುಹಿಸಿಬಿಟ್ಟಳು.

ಒಂದು ದಿನ ಮಧ್ಯಾಹ್ನ ಒಬ್ಬ ಗಾರುಡೀವಿದ್ಯೆಯವನು ಆ ಊರಿಗೆ ಬಂದು ಬೀದಿಯಲ್ಲಿ ಪ್ರದರ್ಶನ ನಡೆಸುತ್ತಿದ್ದನು. ಹೆಂಗುಸರೆಲ್ಲಾ ಅವನ ಸುತ್ತಲೂ ಕೂಡಿ ಪ್ರದರ್ಶನ ನೋಡುತ್ತಿದ್ದರು. ವಿದ್ಯಾವತಿ ಮಾತ್ರ ಆ ಕಡೆಗೆ ಬರಲೇ ಇಲ್ಲ. ಯಾರೋ ಕರೆದುದಕ್ಕೆ "ನಮ್ಮನೆಗೆ ನಮ್ಮ ಜನ ಬರುತ್ತಾರೆ, ತುಂಬಾ ಕೆಲಸವಿದೆ" ಎಂದಳಷ್ಟೇ.

ಇದೇ ವಿಧವಾಗಿ ಕಾಶಿಯಿಂದ ಬಳೆಗಾರನು ಬಂದರೂ. ಕಂಚಿಯಿಂದ ಪಟ್ಟೆಸೀರೆಯವನು ಬಂದರೂ ಅವರನ್ನು ನೋಡಲಿಕ್ಕಾಗಲೀ, ವ್ಯಾಪಾರ ಮಾಡಲಿಕ್ಕಾಗಲೀ ವಿದ್ಯಾವತಿ ಬರಲಿಲ್ಲ. ತನಗೆ ಒಂದು ಕ್ಷಣವೂ ಬಿಡುವಿಲ್ಲವೆಂದು ಎಲ್ಲರಿಗೂ ಹೇಳಿಬಿಟ್ಟಳು. ಅವಳ ಮುಖದಲ್ಲಿರುವ ಗಾಬರಿಯನ್ನು ನೋಡಿ, ರಾಜಯ್ಯನ ತಂಗಿಯಂದಿರು ಬಹಳ ಬಿಂಕಬೀಗಿಗಳಾಗಿರಬೇಕೆಂದು ಎಲ್ಲರಿಗೂ ತೋರಿತು. ಆದರಿಂದ ಆ ಬರುವವರನ್ನು ನೋಡಬೇಕೆಂಬ ಕುತೂಹಲವು ಎಲ್ಲರಿಗೂ ಹುಟ್ಟಿತು, ಅಂತೆಯೇ ಎಲ್ಲರೂ ಸುಮಾರಮಾರ ಬರುವಿಕೆಯನ್ನು ಕಾಯುವವರೇ. ಅಂತೂ ರಾಜಯ್ಯನ ತಂಗಿಯರಿಬ್ಬರು ಅಣ್ಣನ ಮನೆಗೆ ಬಂದರು. ಅವರು ವಿದ್ಯಾವತಿಯೊಂದಿಗೆ ಹೇಗೆ ನಡೆದುಕೊಳ್ಳುವರೋ ಎಂದು ನೋಡಲು ಆ ದಿನ ಮಧ್ಯಾಹ್ನ ಆ ಬೀದಿಯಲ್ಲಿದ್ದ ಹೆಂಗುಸರೆಲ್ಲಾ ವಿದ್ಯಾವತಿಯ ಮನೆಗೆ ಹೋಗಿ ಅಲ್ಲಿಯ ದೃಶ್ಯವನ್ನು ನೋಡಿ ಬೆರಗಾದರು.

ಬಂದ ಇಬ್ಬರಲ್ಲಿ ಸುಮಾಳು ನೆಲಗಡಲೆಯ ಸಿಪ್ಪೆಯನ್ನು ಸುಲಿಯುತ್ತಾ ಕುಳಿತಿದ್ದಳು. ರಮಾಳು ಒಲೆಯ ಮುಂದೆ ಕುಳಿತು ಅರಳು ಹುರಿದುಹುರಿದು ತಳ್ಳುತ್ತಿದ್ದಳು. ವಿದ್ಯಾವತಿ ಗಡಿಬಿಡಿಯಿಂದ ಆಚೆಗೂ ಈಚೆಗೂ ತಿರುಗಾಡಿಕೊಂಡಿದ್ದಳು.

ನೋಡ ಬಂದ ಹೆಂಗುಸರಲ್ಲಿ ಒಬ್ಬಳು ಮುಖಕೊಂಕಿಸಿ, "ಅಯ್ಯೋ! ಇಷ್ಟೊಂದಕ್ಕೇನಾ ಇಷ್ಟು ದಿನಗಳವರೆಗೆ ಮನೆಬಿಟ್ಟು ಹೊರಗೆ ಬಾರದೆ ಕೂತಿದ್ದಿಯಾ?" ಎಂದಳು.

"ಅಯ್ಯೋ! ಇದು ಸ್ವಲ್ಪದರಲ್ಲಿ ಮುಗಿಯೋದುಂಟೇ? ಆಲೋಚನೆ ಮಾಡುತ್ತಿದ್ದರೇನೇ ಕೈಕಾಲುಗಳು ತಟಸ್ಥವಾಗುವಂತಿವೆಯಲ್ಲಾ!" ಎಂದಳು ವಿದ್ಯಾವತಿ.

"ನಮ್ಮತ್ತಿಗೆ ತುಂಬ ಗಡಿಬಿಡಿ ಮನಸ್ಸಿನವಳು ಅಂತ ನಮಗ್ಗೊತ್ತು" ಎಂದು ನಗುತ್ತಾ ಸುಮಾ ರಮಾ ಇಬ್ಬರೂ ಹೇಳಿದರು. "ಈಗ ನಮಗೂ ಗೊತ್ತಾಯಿತು" ಎಂದು ಎಲ್ಲರೂ ನಕ್ಕರು.



# ಸಾಲ ತೀರಿತು

ಒಂದು ಸಾರಿ ಶಿವಯ್ಯನು ಸಂತೆಯಲ್ಲಿ ಒಂದು ಮೇಕೆ ಕೊಂಡುಕೊಳ್ಳಬೇಕೆಂದು ವೆಂಕಟಾದ್ರಿಯ ಕೈಯಿಂದ ಹತ್ತು ವರಹಗಳನ್ನು ಸಾಲ ತೆಗೆದುಕೊಂಡನು. ಅದು ಸತ್ತುಹೋಗಿಬಿಟ್ಟಿತು. ಸಾಲ ತೀರಿಸಬೇಕೆಂಬ ಮನಸ್ಸೇ ಇರಲಿಲ್ಲ ಶಿವಯ್ಯನಿಗೆ.

ವೆಂಕಟಾದ್ರಿ ತನ್ನ ಸಾಲ ಕೇಳಲು ಶಿವಯ್ಯನ ಮನೆಗೆ ಬಂದಾಗಲೆಲ್ಲ, ತನ್ನ ಹೆಂಡತಿಯಿಂದ ತಾನು ಮನೆಯಲ್ಲಿಲ್ಲವೆಂದು ಹೇಳಿಸಿಬಿಡುತ್ತಿದ್ದನು.

ಅವನ ಮನೆಯ ಇದಿರಿನಲ್ಲಿದ್ದ ಗಣಪತಿ ಎಂಬವನು "ಮನೆಯಲ್ಲಿದ್ದೇ ಇಲ್ಲವೆಂದು ಹೇಳಿಸುವಿಯಾ? ವೆಂಕಟಾದ್ರಿಯೊಂದಿಗೆ ಹೇಳುತ್ತೇನೆ ಇರು" ಎಂದು ಬೆದರಿಸಿದನು. ಶಿವಯ್ಯ ಅವನಿಗೆ ಒಂದು ವರಹ ಲಂಚ ಕೊಟ್ಟು ಬಾಯಿ ಮುಚ್ಚಿಸಿದನು.

ಆದರೆ ಗಣಪತಿ ಅಷ್ಟಕ್ಕೆ ಸುಮ್ಮನಿರದೆ, ಅನೇಕ ಸಾರಿ ಬೆದರಿಸಿ ಅವನಿಂದ ಅನೇಕ ವರಹಗಳನ್ನು ಪಡೆದುಕೊಂಡನು.

ಒಂದು ಸಾರಿ ಹಠಾತ್ತಾಗಿ ವೆಂಕಟಾದ್ರಿಯೇ ಶಿವಯ್ಯನಿಗೆ ಇದಿರಾದನು. "ನಿಮ್ಮ ಸಾಲ ಬೇಗದಲ್ಲೇ ತೀರಿಸಿಬಿಡುತ್ತೇನೆ" ಎಂದ ಶಿವಯ್ಯ. "ಇನ್ನೆಲ್ಲಿಯ ಸಾಲ? ಗಣಪತಿ ವಸೂಲು ಮಾಡಿ ಕೊಟ್ಟಬಿಡಿ. ನೀವೇನೂ ಕೊಡಬೇಕಾಗಿಲ್ಲ" ಎಂದ ವೆಂಕಟಾದ್ರಿ.





# ಕನಸುಕೊಂಡಕಥೆ

ಒಂದು ದೇಶದಲ್ಲಿ ಒಬ್ಬ ರಾಜನಿಗೆ ಬುದ್ಧಿ ಎಷ್ಟೆಂದರೆ ಅಷ್ಟೇ. ಅಂತಹ ರಾಜನಿಗೆ ಇಬ್ಬರು ಮುಖ್ಯ ಮಂತ್ರಿಗಳು. ಅವರಲ್ಲಿ ರಂಜನನೆಂಬ ಮಂತ್ರಿ ಬುದ್ಧಿವಂತ; ಭಂಜನನೆಂಬ ಮಂತ್ರಿ ಮಹಾಮೂರ್ಖ. ರಾಜನೂ ಮೂರ್ಖನಾದುದರಿಂದ ಭಂಜನನೂ ತನ್ನಂತೆಯೇ ಬುದ್ಧಿಯುಳ್ಳವನೆಂದುಕೊಂಡು ರಾಜನು ಅವನ ಆಲೋಚನೆಯಂತೆಯೇ ಕಾರ್ಯಗಳನ್ನು ಮಾಡಿಸುತ್ತಿದ್ದನು. ಆದರಿಂದಾಗಿ ಪ್ರಜೆಗಳಿಗೆ ಅನೇಕ ಕಷ್ಟನಷ್ಟ ಅನರ್ಥಗಳೆಲ್ಲ ಸಂಭವಿಸುತ್ತಿದ್ದುವು. ಇವುಗಳಿಂದ ಹೇಗೆ ಬಿಡುಗಡೆಯಾಗುವುದೋ ಎಂದು ಜನರೆಲ್ಲ ಒಳಗೊಳಗೇ ಚಿಂತಿಸಿಕೊಂಡಿದ್ದರು.

ಗವಾಕ್ಷನೆಂಬ ಯುವಕನೊಬ್ಬನಿಗೆ ಒಂದು ಆಲೋಚನೆಯುಂಟಾಯಿತು. ಅವನು ಸ್ವಪ್ನದಲ್ಲಿ ತನಗೆ ರಾಜಕುಮಾರಿಯೊಂದಿಗೆ ಮದುವೆಯಾಯಿತೆಂದು ಕಂಡ ಕಂಡವರೊಂದಿಗೆಲ್ಲಾ ಹೇಳತೊಡಗಿದನು. ಈ ಮಾತು ರಾಜನ ಕಿವಿಯವರೆಗೂ ಹರಡಿತು. ಅದನ್ನು ಕೇಳಿ ರಾಜನು ಗವಾಕ್ಷನನ್ನು ತನ್ನ ಮುಂದೆ ಕರೆಯಿಸಿ, "ಏನೋ, ಕನಸಿನಲ್ಲಿ ನನ್ನ ಮಗಳೊಂದಿಗೆ ನಿನ್ನ ಮದುವೆಯಾಯಿತೆಂದು ನೀನು ಎಲ್ಲರೊಂದಿಗೂ ಹೇಳುವೆಯಂತೆ, ನಿಜವೇನು ?" ಎಂದು ಕೇಳಿದನು. "ಮಹಾಪ್ರಭುಗಳೇ, ಎರಡೂ ನಿಜವೇ. ನನಗೆ ಹಾಗೆ ಕನಸು ಬಂದದ್ದೂ ನಿಜ, ನಾನು ಆ ಸಂಗತಿಯನ್ನು ಎಲ್ಲರೊಂದಿಗೆ ಹೇಳಿದ್ದೂ ನಿಜ. ಸ್ವಪ್ನದಲ್ಲಿಯೇ ಆದರೂ ಏನಾಯಿತು ? ಮಹಾರಾಜರ ಅಳಿಯನಾಗುವುದೆಂದರೆ ದೊಡ್ಡ ವಿಷಯವಲ್ಲವೇ ?" ಎಂದ ಗವಾಕ್ಷ.

ಆ ಮಾತು ಕೇಳಿ ರಾಜನು ತನ್ನ ಮಂತ್ರಿಗಳ ಆಲೋಚನೆ ಕೇಳಿದನು. "ಮಹಾರಾಜರೆ, ಅವನಿಗೆ ರಾಜಕುಮಾರಿಯೊಂದಿಗೆ ಮದುವೆಯಾಯಿತೆಂದು ಸ್ವಪ್ನ ಬರುವುದು ತಪ್ಪೇನಲ್ಲ. ಆದರೆ ಅದನ್ನು ಕುರಿತು ಅವನು ಎಲ್ಲರೊಂದಿಗೆ ಹೇಳಿಕೊಂಡದ್ದು ತಪ್ಪು. ಅದಕ್ಕೆ ಬೇಕಾದರೆ ತಕ್ಕ ವಿಧದಲ್ಲಿ ಶಿಕ್ಷಿಸಬಹುದು" ಎಂದ ರಂಜನ ಮಂತ್ರಿ.

"ಇಂತಹ ಸಾಮಾನ್ಯನೊಬ್ಬ ರಾಜನಿಗೆ ಗೊತ್ತಾಗದಂತೆ ರಾಜಕುಮಾರಿಯನು ಮದುವೆಯಾಗುವುದು ಬಹುದೊಡ್ಡ ರಾಜದ್ರೋಹ. ಇವನನ್ನು ಗಲ್ಲಿಗೇರಿಸುವುದೇ ತಕ್ಕ ಶಿಕ್ಷೆ !" ಎಂದ ಭಂಜನ. ಕೂಡಲೇ ಗವಾಕ್ಷನ ವಿಚಾರಣೆಗಾಗಿ ಬಹಿರಂಗ ಸಭೆಗೆ

ಕೆ. ಸದಾನಂದ

ಏರ್ಪಾಡು ಮಾಡಲಾಯಿತು. ಅವನ ಅಪರಾಧವನ್ನು ತಿಳಿದು ವಿಚಾರಣೆಯನ್ನು ನೋಡಲು ಜನರು ತಂಡೋಪತಂಡವಾಗಿ ಬಂದು ಕೂಡಿದರು.

ಗವಾಕ್ಷನು ತನಗೆ ಹಾಗೆ ಸ್ವಪ್ನಬಿದ್ದದ್ದು ನಿಜವೇ ಎಂದು ಎಲ್ಲರ ಮುಂದೆಯೂ ಒಪ್ಪಿಕೊಂಡನು. ಆಗ ರಾಜನು ಅವನನ್ನು ನೋಡಿ ಕಣ್ಣು ತಿರುಗಿಸುತ್ತ, "ಕನಸಿನಲ್ಲಿ ನನ್ನ ಮಗಳನ್ನು ಮದುವೆ ಮಾಡಿಕೊಳ್ಳಬೇಕಾದರೆ ನಿನಗೆಷ್ಟು ಧೈರ್ಯ! ಏನು ಸೊಕ್ಕು!" ಎಂದು ಗರ್ಜಿಸಿದನು.

"ಮಹಾಪ್ರಭುಗಳು ಮನ್ನಿಸಬೇಕು. ಇದರಲ್ಲಿ ನನ್ನದು ಯಾವ ತಪ್ಪೂ ಇಲ್ಲ. ರಾಜಕುಮಾರಿಯವರ ಪಾದರಕ್ಷೆಗಳನ್ನು ಒರೆಸಲಿಕ್ಕೂ ನಾನು ಅರ್ಹನಲ್ಲವೆಂದು ನನಗೆ ಗೊತ್ತು. ನಾನು 'ಒಲ್ಲೆನೋ ಬೇಡವೋ' ಅಂತ ಎಷ್ಟು ಕೂಗಿಕೊಂಡರೂ ಕೇಳದೆ ನಮ್ಮ ನೆರೆದೇಶದ ರಾಜ ಭಲ್ಲೂಕವರ್ಮ ನನ್ನನ್ನು ಎಳೆದು ನಿಮ್ಮ ಕುಮಾರಿಯೊಂದಿಗೆ ಮದುವೆ ಮಾಡಿಸಿಬಿಟ್ಟ!" ಎಂದ ಗವಾಕ್ಷ. ಈ ಮಾತು ಕೇಳಿದ ಕೂಡಲೇ ರಾಜನು ಉರಿದುಬಿದ್ದು, "ಈ ಭಲ್ಲೂಕವರ್ಮನಿಗೆ ಅಷ್ಟೊಂದು ಸೊಕ್ಕು ಬಂದಿದೆಯೇ? ಅವನ ಮದವನ್ನು ಅಡಗಿಸಲೇ ಬೇಕು. ನೀನೇನು ಹೇಳುವಿ ರಂಜನ ಮಂತ್ರೀ?" ಎಂದನು.

"ಮಹಾರಾಜರೇ, ಅದೆಲ್ಲಾ ಕೇವಲ ಸ್ವಪ್ನ ತಾನೇ? ಕಾರಣವೇನಿಲ್ಲದೆ ನೆರೆರಾಜನೊಂದಿಗೆ ವಿವಾದ ತಂದುಕೊಳ್ಳುವುದು ರಾಜ್ಯಕ್ಕೆ ಕ್ಷೇಮವಲ್ಲ. ರಾಜಗೌರವಕ್ಕೆ ಭಂಗವನ್ನುಂಟು ಮಾಡಿದ ಈ ಗವಾಕ್ಷನನ್ನು ಶಿಕ್ಷಿಸುವಷ್ಟರವರೆಗೇ ನಮ್ಮ ಕರ್ತವ್ಯ" ಎಂದ ಭಂಜನ.

"ನೀನೇನು ಹೇಳುವಿ ಭಂಜನ ಮಂತ್ರೀ?" ಎಂದು ಕೇಳಿದ ರಾಜ. ಕೂಡಲೇ ಭಂಜನನು "ಮಹಾರಾಜರೇ, ಆ ಭಲ್ಲೂಕಭಡವನನ್ನು ಕ್ಷಮಿಸಿ



ಬಿಟ್ಟರೆ, ನಾವು ಅಂಜು ಕುಳಿಗಳಾದಂತೆಯೇ. ಅವನ ತಲೆ ಕಡಿಸಲೇ ಬೇಕು!" ಎಂದ ಭಂಜನ.

ಕೂಡಲೇ ರಾಜನು ಸೇನಾಧಿಪತಿಯ ಕಡೆಗೆ ತಿರುಗಿ, "ಸೇನಾನಿಯೇ, ಈ ಕ್ಷಣದಲ್ಲೇ ಸೈನ್ಯವನ್ನು ಸಿದ್ಧಪಡಿಸಿ ರಾಜಪುರೋಹಿತನಿಂದ ದಂಡಯಾತ್ರೆಗೆ ಮುಹೂರ್ತವಿಡಿಸು. ತತ್ಕ್ಷಣ ಹೊರಡುವಂಥ ಮುಹೂರ್ತವನ್ನೇ ಇಡಲಿ" ಎಂದನು.

ಆಗ ಗವಾಕ್ಷನು ರಾಜನನ್ನು ನೋಡಿ, "ಮಹಾಪ್ರಭುಗಳೇ ತಾವು ನನ್ನ ಕನಸನ್ನು ಪೂರ್ತಿಯಾಗಿ ಕೇಳಲಿಲ್ಲ. ನನ್ನ ಮದುವೆ ಭಲ್ಲೂಕವರ್ಮನ ಮೂಲಕ ಹೇಗೆ ನಡೆಯಿತೆಂದು ನಾನಿನ್ನೂ ಹೇಳಲಿಲ್ಲ. ಅವನು ಮೊದಲು ನಮ್ಮ ರಾಜ್ಯದ ಮೇಲೆ ದಂಡೆತ್ತಿ ಬಂದು. ಈ ರಂಜನ ಭಂಜನ ಮಹಾಮಂತ್ರಿಗಳ ಎದುರಿನಲ್ಲೇ ತಮ್ಮನ್ನು ಸಂಹರಿಸಿಬಿಟ್ಟನು. ಆಗ ರಂಜನ ಮಂತ್ರಿಯವರು ತಮ್ಮ ಮೇಲಿನ ವಿಶ್ವಾಸದಿಂದ 'ಅಯ್ಯೋ ದೇವರಂಥ ಮಹಾರಾಜರು ಹೋದ ಮೇಲೆ ನಾನು

ಬದುಕಿ ಏನು ಪ್ರಯೋಜನ?' ಎಂದು ಕೂಗುತ್ತಾ ಕತ್ತಿಯಿಂದ ತಮ್ಮನ್ನು ತಾವೇ ತಿವಿದು, ಆತ್ಮಹತ್ಯೆ ಮಾಡಿಕೊಂಡರು," ಎಂದನು.

ಈ ಮಾತು ಕೇಳಿ ರಾಜನು ಸಂತೋಷದಿಂದ ರಂಜನ ಮಂತ್ರಿಯನ್ನು ಆಲಿಂಗಿಸಿಕೊಂಡು, ಗವಾಕ್ಷ ನನ್ನು ನೋಡಿ, "ಆಗ ನಮ್ಮ ಭಂಜನ ಮಂತ್ರಿ ಏನು ಮಾಡುತ್ತಿದ್ದ ?" ಎಂದು ಕೇಳಿದನು.

ಗವಾಕ್ಷನು ಕಣ್ಣಿನಲ್ಲಿ ನೀರು ತಂದುಕೊಂಡು, "ಪ್ರಜೆಗಳೆಲ್ಲಾ ನಿಮಗಾಗಿ ಅಳುತ್ತಾ ಗೋಳಾಡುತ್ತಾ ಇರುವಾಗ, ಭಂಜನ ಮಂತ್ರಿಯವರು 'ಶರಣು ಶರಣು' ಎಂದು ಭಲ್ಲೂಕವರ್ಮನ ಪಾದಗಳ ಮುಂದೆ ಸಾಷ್ಟಾಂಗ ಬಿದ್ದರು. ಅವರನ್ನು ಎತ್ತಿ ಬೆನ್ನು ತಟ್ಟಿ ಭಲ್ಲೂಕವರ್ಮನು ತನ್ನ ಮಂತ್ರಿಯನ್ನಾಗಿ ಮಾಡಿ ಕೊಂಡನು. ಅವರು ಆ ರಾಜನಿಗೆ ಗಟ್ಟಿಯಾಗಿ ಜಯ ಘೋಷ ಮಾಡಿದರು ಪ್ರಭುಗಳೇ" ಎಂದನು.

ರಾಜನು ಭಲ್ಲೂಕವರ್ಮನನ್ನು ಕೋಪದಿಂದ ಸುಡುವ ಹಾಗೆ ನೋಡುತ್ತ "ಇಷ್ಟೊಂದು ವಿಶ್ವಾಸ ಘಾತುಕನೇ ಈ ಭಂಜನ? ಶಿರಚ್ಛೇದವೇ ಇವನಿಗೆ ತಕ್ಕ ಶಿಕ್ಷೆ!" ಎಂದನು.

ಅದನ್ನು ಕೇಳಿ ರಂಜನನು ಕಿವಿಗಳನು ಮುಚ್ಚಿ ಕೊಂಡು "ಶಿವಶಿವಾ!" ಎಂದನು. ರಾಜನು ತನ್ನ ಅಭ್ಯಾಸದಂತೆ, "ನೀನೇನು ಹೇಳುವಿ ಭಂಜನ ಮಂತ್ರೀ ?" ಎಂದು ಕೇಳಿದನು. ರಾಜನ ಮೂರ್ಖ ತ್ವವು ಎಂತಹುದೆಂದು ಬಲ್ಲ ಭಂಜನನು ಸರ್ವಾಂಗ ದೊಂದಿಗೆ ಕಂಪಿಸುತ್ತ, "ಮಹಾಪ್ರಭುಗಳು ನನ್ನ ಮೇಲೆ ಕನಿಕರತಾಳಬೇಕು. ಬದುಕಿದರೆ ಬೇಡಿ ತಿಂದು ಕೊಂಡಿದ್ದೇನು. ತಾವು ಅಪ್ಪಣೆ ಕೊಟ್ಟರೆ ನಾನು ಈ ರಾಜ್ಯವನ್ನೇ ಬಿಟ್ಟು ಹೋಗುತ್ತೇನೆ" ಎಂದನು ಗದ್ಗದ ಸ್ವರದಿಂದ.

ಅಭ್ಯಾಸದಂತೆ "ಹಾಗೇ ಆಗಲಿ" ಎಂದ ರಾಜ. ಆ ದಿನವೇ ಭಂಜನನು ಆ ದೇಶ ಬಿಟ್ಟು ಹೊರಟು ಹೋಗಿಬಿಟ್ಟನು. ಅವನು ಸಭೆಯಿಂದ ಹೊರಟು ಹೋದ ಕೂಡಲೇ ರಾಜನು, "ಇಷ್ಟೆಲ್ಲಾ ಸತ್ಯವನ್ನು ಹೊರಗೆ ಹಾಕಿರುವ ಈ ಗವಾಕ್ಷನಿಗೆ ಏನಾದರೂ ಬಹುಮಾನ ಕೊಡಬೇಕು. ಏನು ಹೇಳುವೆ ರಂಜನ ಮಂತ್ರಿ ?" ಎಂದನು.

"ಇವನು ತಮ್ಮ ಅಳಿಯನೆಂಬ ಸುದ್ದಿ ದೇಶದಲ್ಲೆಲ್ಲಾ ಹರಡಿಹೋಯಿತು. ಅದು ಅಪವಾದ ರೂಪದಲ್ಲಿ ಇರುವುದು ಒಳ್ಳೆಯದಲ್ಲವಷ್ಟೆ? ನಿಮ್ಮ ಕುಮಾರಿ ಯನ್ನು ಇವನಿಗೇ ಕೊಟ್ಟು ಮದುವೆ ಮಾಡಿಬಿಟ್ಟರೆ ಎಲ್ಲಾ ಸರಿಯಾಗಿ ಬಿಡುತ್ತದೆ. ಇವನೂ ಅರ ಮನೆಯ ಅಂತಸ್ತಿಗೆ ಏರಿ ಬಿಡುತ್ತಾನೆ" ಎಂದು ರಂಜನ ಮಂತ್ರಿ ಗವಾಕ್ಷನ ಮೇಲೆ ತುಂಬಿದ ಕೃತಜ್ಞತೆ ಯೊಂದಿಗೆ ಹೇಳಿದನು. ಹಾಗೆಯೇ ಆಯಿತು.



# ಸಜಾತಿ ಪರಜಾತಿ

ಒಂದು ಊರಿನಲ್ಲಿ ಅಕ್ಕಸಾಲಿಯೂ ಕಮ್ಮಾರನೂ ಪಕ್ಕಪಕ್ಕದಲ್ಲೇ ಅಂಗಡಿ ಇಟ್ಟುಕೊಂಡಿದ್ದರು. ಒಂದು ದಿನ ಅಕ್ಕಸಾಲಿ ಬಂಗಾರವನ್ನು ಸಣ್ಣ ಸುತ್ತಿಯಿಂದ ಹೊಡೆಯುತ್ತಿದ್ದಾಗ, ಒಂದು ಬಂಗಾರದ ತುಣುಕು ಹಾರಿ ಕಮ್ಮಾರನ ಅಂಗಡಿಯಲ್ಲಿ ಬಿತ್ತು.

ಬಂಗಾರದ ತುಣುಕು ಬಿದ್ದಲ್ಲಿಯೇ ಒಂದು ಕಬ್ಬಿಣದ ತುಣುಕೂ ಇದ್ದಿತು.

ಅದು ಬಂಗಾರದ ತುಣುಕಿನೊಂದಿಗೆ "ಏನಮ್ಮ, ನಿನ್ನ ಅಂಗಡಿ ಬಿಟ್ಟು ಇಲ್ಲಿಗೆ ಹಾರಿ ಬಂದೆಯಲ್ಲಾ ? ಏನಾಯಿತು ?" ಎಂದಿತು.

"ಏನು ಹೇಳಲಿ ? ನನ್ನನ್ನು ಮೂಸೆಯಲ್ಲಿ ಕರಗಿಸಿ ಸುತ್ತಿಯಿಂದ ಬಡಿಯುತ್ತಿದ್ದಾರೆ. ಆ ಪೆಟ್ಟು ತಡೆಯಲಾರದೆ ಹೀಗೆ ಹಾರಿ ಬಂದು ಬಿದ್ದೆ. ಅದಕ್ಕಿಂತ ಹೆಚ್ಚಾಗಿ ನನ್ನನ್ನು ಸಂಕಟಪಡಿಸುವುದೇನೆಂದರೆ, ನನ್ನನ್ನು ಹೊಡೆಯುವವನು ನನ್ನ ಜಾತಿಯವನಲ್ಲ, ಇನ್ನೊಂದು ಜಾತಿಯುವನು !" ಎಂದಿತು ಬಂಗಾರದ ತುಣುಕು.

"ನನ್ನ ಗೋಳು ಯಾರೊಂದಿಗೆ ಹೇಳಲಿ ? ನನ್ನನ್ನು ಇದ್ದಕ್ಕಿದ್ದ ಹಾಗೇ ನಿಗಿನಿಗಿ ಉರಿಯುವ ಕುಲುಮೆಯಲ್ಲಿ ಸುಟ್ಟು, ಬಿಸಿ ತಗ್ಗುವುದಕ್ಕೆ ಮೊದಲೇ ದೊಡ್ಡ ದೊಡ್ಡ ಸುತ್ತಿಗೆಯಿಂದ ಸಾಯುವ ಹಾಗೆ ಹೊಡೆಯುತ್ತಾರೆ. ಆ ಹೊಡೆಯುವವನು ಪರಜಾತಿಯವನಾದರೂ ಸಹಿಸಿಕೊಂಡೇನು. ನನ್ನ ಜಾತಿಯವನೇ ನನ್ನ ಹಾಗೆ ಕಷ್ಟಗಳನ್ನು ಅನುಭವಿಸಿದವನೇ ನನ್ನನ್ನು ಮೋಸ ಮಾಡುತ್ತಾನೆಂದರೆ ನಿನ್ನದು ಕಷ್ಟವೇ ಅಲ್ಲ ಗೊತ್ತಾ ?" ಎಂದಿತು ಕಬ್ಬಿಣದ ತುಣುಕು.



# ಜಯಾಪಜಯಗಳು

ಕೀರ್ತಿವರ್ಮನೆಂಬ ರಾಜನಿಗೆ ಮೊತ್ತ ಪ್ರಪಂಚವನ್ನೇ ಜಯಿಸಬೇಕೆಂಬ ಕೋರಿಕೆಯುಂಟಾಯಿತು. ರಾಜನ ಬುದ್ಧಿಯನ್ನು ಬದಲಾಯಿಸಲು ಇನ್ನು ಸಾಧ್ಯವಿಲ್ಲವೆಂದುಕೊಂಡು ಮಂತ್ರಿ "ಯಾವುದಕ್ಕೂ ತಮ್ಮ ಕುಲಗುರುವಾದ ರಾಜರ್ಷಿಗಳ ಆಲೋಚನೆ ತೆಗೆದುಕೊಳ್ಳಿರಿ" ಎಂದು ಹೇಳಿದನು.

ಕೀರ್ತಿವರ್ಮನು ರಾಜರ್ಷಿಯ ಆಶ್ರಮಕ್ಕೆ ಹೋಗಿ ತನ್ನ ಬಯಕೆಯನ್ನು ಅವರೊಂದಿಗೆ ಹೇಳಿಕೊಂಡನು.

"ರಾಜಾ, ನೀನು ಕೋಪವನ್ನು ಪೂರ್ತಿ ವಶಪಡಿಸಿಕೊಂಡೆಯಾದರೆ, ಪ್ರಪಂಚವನ್ನು ಜಯಿಸುವೆ. ಕೋಪವನ್ನು ಪೂರ್ತಿಯಾಗಿ ಜಯಿಸಿದ ಮೇಲೆ ನನ್ನನ್ನು ಬಂದು ನೋಡು. ಪ್ರಪಂಚ ಜಯಿಸುವ ಮಾರ್ಗ ಹೇಳುತ್ತೇನೆ." ಎಂದನು ರಾಜರ್ಷಿ.

ಹನ್ನೊಂದು ದಿನಗಳ ಮೇಲೆ ಕೀರ್ತಿವರ್ಮನು ಮತ್ತೆ ರಾಜರ್ಷಿಯ ಬಳಿಗೆ ಹೋಗಿ, "ಸ್ವಾಮಿ, ಕೋಪವನ್ನು ಜಯಿಸಿದ್ದೇನೆ. ಅದೇನೂ ದೊಡ್ಡ ಕಾರ್ಯವಾಗಿ ಕಾಣಲಿಲ್ಲ. ಈಗಪ್ರಪಂಚವನ್ನು ಜಯಿಸುವ ಮಾರ್ಗ ಹೇಳಿರಿ. ಏನು ಮಾಡಬೇಕು?" ಎಂದನು.

"ರಾಜಾ. ನೀನು ಕೋಪವನ್ನು ಜಯಿಸಲಾರೆ ಎಂಬ ಧೈರ್ಯದಲ್ಲಿ ಹಾಗೆ ಹೇಳಿದೆನೇ ಹೊರತು, ನಿಜಕ್ಕೂ ಪ್ರಪಂಚ ಜಯಿಸುವ ಮಾರ್ಗ ನನಗೆ ಗೊತ್ತಿಲ್ಲ." ಎಂದನು ರಾಜರ್ಷಿ.

ಕೀರ್ತಿವರ್ಮನು ಕೋಪಾವೇಶದಿಂದ ಕತ್ತಿ ಹಿರಿದು, "ನನ್ನೊಂದಿಗೋ ನಿಮ್ಮ ಹುಡುಗಾಟ?" ಎಂದು ಗರ್ಜಿಸಿದನು.

"ನಿಲ್ಲು ರಾಜಾ! ಕೋಪವನ್ನೇ ಜಯಿಸಲಿಲ್ಲ ನೀನು. ಪ್ರಪಂಚವನ್ನು ಜಯಿಸುವೆಯಾ?" ಎಂದ ರಾಜರ್ಷಿ ಮುಗುಳು ನಗುತ್ತಾ.

ರಾಜನು ನಾಚಿ ತಲೆ ತಗ್ಗಿಸಿದ.





# ದಶಾವತಾರಗಳು



ಪರಮಾತ್ಮನು ತ್ರಿಮೂರ್ತಿಗಳ ರೂಪದಲ್ಲಿ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತಾನೆ. ಬ್ರಹ್ಮನಾಗಿ ಪ್ರಪಂಚವನ್ನು ಸೃಷ್ಟಿಸುತ್ತಾನೆ. ವಿಷ್ಣುವಾಗಿ ಅದನ್ನು ಪೋಷಿಸುವನು. ಶಿವನಾಗಿ ಪ್ರಪಂಚವನ್ನು ಲಯಗೊಳಿಸಿ ಹೊಸ ಸೃಷ್ಟಿಗೆ ಅವಕಾಶ ನೀಡುವನು. ಜಗತ್ತಿನ ಪರಿಣಾಮವು ಕೊನೆ ಸಾಗಲಿಕ್ಕಾಗಿ ವಿಷ್ಣು ಆಗಾಗ ಅವತಾರಗಳನ್ನೆತ್ತುವನು. ಒಂದು ಸಾರಿ ಪ್ರಳಯವಾಗಿ ಪ್ರಪಂಚವು ಮುಳುಗಿದಾಗ ವಿಷ್ಣು ಮತ್ಸ್ಯಾವತಾರವನ್ನೆತ್ತಿ ಮನುವನ್ನೂ ಸಪ್ತರ್ಷಿಗಳನ್ನೂ ಇತರ ಪ್ರಾಣಿಗಳನ್ನೂ ಕಾಪಾಡಲಿಕ್ಕಾಗಿ ಅವರೆಲ್ಲ ಏರಿಕೊಂಡಿದ್ದ ಹಡಗನ್ನು ಹಿಮಾಲಯದ ಶಿಖರಕ್ಕೆ ತಲಪಿಸಿದನು. ಮನು ಪ್ರಾಣಿಗಳನ್ನು ಮತ್ತೆ ಸೃಷ್ಟಿಸಿದನು.

ಒಬ್ಬ ರಾಕ್ಷಸನು ವೇದಗಳನ್ನು ಕದ್ದು, ಸಮುದ್ರದಲ್ಲಿ ಅಡಗಿಕೊಂಡಾಗ ಮತ್ಸ್ಯಾವತಾರದ ವಿಷ್ಣು ಆ ರಾಕ್ಷಸನನ್ನು ಕೊಂದು ವೇದಗಳನ್ನು ಮನುವಿಗೆ ಕೊಟ್ಟನು.







ಮಂದರ ಪರ್ವತವನ್ನು ಕಡೆಗೋಲಾಗಿ, ಸರ್ಪ ರಾಜ ವಾಸುಕಿಯನ್ನು ಹಗ್ಗವಾಗಿ ಮಾಡಿ, ದೇವತೆಗಳೂ ರಾಕ್ಷಸರೂ ಅಮೃತಕ್ಕಾಗಿ ಸಮುದ್ರವನ್ನು ಕಡೆಯಲು ತೊಡಗಿದಾಗ ಮಂದರ ಪರ್ವತವು ನೀರಿನಲ್ಲಿ ಮುಳುಗಿ ಹೋಯಿತು. ಆಗ ವಿಷ್ಣು ಕೂರ್ಮಾವತಾರ ದಿಂದ ಅದನ್ನೆತ್ತಿ ತನ್ನ ಬೆನ್ನ ಮೇಲೆ ಅದು ತೇಲುವಂತೆ ಮಾಡಿದನು.



ಮತ್ತೊಂದು ಸಾರಿ ಹಿರಣ್ಯಾಕ್ಷನೆಂಬ ದಾನವನು ಭೂಮಿಯನ್ನು ಸುರುಳಿ ಸುತ್ತಿ ಸಮುದ್ರದಲ್ಲಿ ಮುಳುಗಿಸಿಬಿಟ್ಟನು. ಆಗ ವಿಷ್ಣು ವರಾಹಾವ ತಾರವನ್ನೆತ್ತಿ ಆ ದಾನವನನ್ನು ಕೊಂದು, ಭೂ ದೇವಿಯನ್ನು ನೀರಿನಿಂದ ಉದ್ಧರಿಸಿದನು.



ಹಿರಣ್ಯಾಕ್ಷನ ಸಹೋದರ ಹಿರಣ್ಯಕಶಿಪು ವಿಷ್ಣು ದ್ವೇಷಿ. ಆದರೆ ಅವನ ಮಗ ಪ್ರಹ್ಲಾದನು ವಿಷ್ಣು ಭಕ್ತ. ವಿಷ್ಣು ಎಲ್ಲೆಲ್ಲಿಯೂ ಇರುವನೆಂದು ಪ್ರಹ್ಲಾದನು ಹೇಳಿದಾಗ, ಅದು ಸುಳ್ಳೆಂದು ತೋರಿಸಲು ಹಿರಣ್ಯಕಶಿಪು ಒಂದು ಸ್ತಂಬವನ್ನು ಹೊಡೆದು ಒಡೆದನು. ಆಗ ಸ್ತಂಬದೊಳಗಿನಿಂದ ವಿಷ್ಣು ನರಸಿಂಹ ರೂಪದಲ್ಲಿ ಅವತರಿಸಿ ಹಿರಣ್ಯ ಕಶಿಪುವನ್ನು ಕೊಂದನು.

ಪ್ರಹ್ಲಾದನ ಮೊಮ್ಮಗನಾದ ಬಲಿ ಮೂರು ಲೋಕಗಳನ್ನೂ ಜಯಿಸಿ ಸ್ವರ್ಗದಲ್ಲಿರುವ ದೇವತೆಗಳಿಗೆ ಗತಿಯಿಲ್ಲದಂತೆ ಮಾಡಿದನು. ಆದರೆ ಅವನು ಮಹಾದಾತನಾಗಿದ್ದ. ಯಾರು ಏನು ಕೇಳಿದರೂ ಕೊಡುವವನು. ವಿಷ್ಣು ವಾಮನನೆಂಬ ಕುಳ್ಳ ಬ್ರಹ್ಮಚಾರಿಯ ರೂಪದಲ್ಲಿ ಬಲಿಯ ಬಳಿಗೆ ಹೋಗಿ ಮೂರು ಅಡಿ ಭೂಮಿಯನ್ನು ಕೇಳಿದನು. ಬಲಿ ಧಾರೆಯೆರೆದು ಕೊಟ್ಟನು. ವಾಮನನು ಒಂದು ಅಡಿಯಿಂದ ಭೂಮಿಯನ್ನೂ, ಇನ್ನೊಂದು ಅಡಿಯಿಂದ ಆಕಾಶವನ್ನೂ ಆಕ್ರಮಿಸಿ, ಮೂರನೇ ಅಡಿಗೆ ಸ್ಥಳವಿಲ್ಲದೆ ಬಲಿಯ ನೆತ್ತಿಯ ಮೇಲೆ ಪಾದವನ್ನಿಟ್ಟು ಪಾತಾಳಕ್ಕೆ ಒತ್ತಿಬಿಟ್ಟನು.





ಒಂದು ಸಾರಿ ಕ್ಷತ್ರಿಯರು ಬಲಗರ್ವಿತರಾಗಿ ಋಷಿಮುನಿಗಳನ್ನು ಪೀಡಿಸತೊಡಗಿದರು. ಆಗ ವಿಷ್ಣು ಪರಶುರಾಮನೆಂಬ ಋಷಿಕುಮಾರನಾಗಿ ಹುಟ್ಟಿ, ಇಪ್ಪತ್ತೊಂದು ಸಾರಿ ಕ್ಷತ್ರಿಯರನ್ನು ಹತ ಮಾಡಿದನು.

ತರುವಾಯ ವಿಷ್ಣು ರಾಮನಾಗಿ ಅವತರಿಸಿ ಪ್ರಜೆಗಳಿಗೆ ಆದರ್ಶ ಪುರುಷನಾಗಿ ಜೀವಿಸಿದನು. ಪಿತೃವಾಕ್ಯ ಪರಿಪಾಲನೆ, ಭ್ರಾತೃಪ್ರೇಮ, ಆದರ್ಶ ರಾಜ್ಯ ಪರಿಪಾಲನೆ ಇವು ರಾಮನ ಪ್ರತ್ಯೇಕ ಗುಣಗಳು. ರಾಮನು ಮಹಾವೀರನು.





ತರುವಾಯ ವಿಷ್ಣು ಕೃಷ್ಣಾವತಾರವನ್ನೆತ್ತಿದನು. ಅಸತ್ಯಕ್ಕೆ ಅಪಜಯ, ಸತ್ಯಕ್ಕೆ ಜಯ ಎಂಬು ದನ್ನು ಸಾಧಿಸಿ ತೋರಿಸಿದನು. ಅವನು ಅರ್ಜುನ ನಿಗೆ ಹೇಳಿದ ಗೀತೆ ಎಲ್ಲಾ ಕಾಲಕ್ಕೂ ಎಲ್ಲರಿಗೂ ಮಾರ್ಗದರ್ಶಕವಾಗಿದೆ.



ವಿಷ್ಣು ಬುದ್ಧನಾಗಿ ಅವತರಿಸಿ ಪ್ರಜೆಗಳಿಗೆ ಮುಕ್ತಿ ಮಾರ್ಗ ತೋರಿಸುತ್ತ, ಅಹಿಂಸೆಯನ್ನು ಬೋಧಿಸಿ ದನು. ಜೀವಿತದಲ್ಲಿ ಪ್ರಾಪ್ತವಾಗುವ ಬಗೆಬಗೆಯ ಕಷ್ಟಗಳನ್ನು ಹೇಗೆ ದಾಟಬೇಕೆಂಬುದನ್ನು ಬೋಧಿಸಿದನು ಬುದ್ಧ.



ಮಾನವರಲ್ಲಿ ಇನ್ನೂ ಪೈಶಾಚಿಕ ಪ್ರವೃತ್ತಿ ಹೋಗಲಿಲ್ಲ. ವಿಷ್ಣು ಕಲ್ಕಿಯಾಗಿ ಅವತಾರ ವೆತ್ತಿ, ಮಾನವರೊಳಗಿನ ದುಷ್ಟಶಕ್ತಿಗಳನ್ನು ನಿರ್ಮೂಲಿಸಿ, ಭೂಮಿಯ ಮೇಲೆ, ಆದರ್ಶ ಜೀವನವನ್ನು ನೆಲೆಗೊಳಿಸಲಿರುವನು.



# ರಾಜ್ಯಕ್ಷೇಮ

**ಪೂ**ರ್ವಕಾಲದಲ್ಲಿ ಕಾಶೀ ರಾಜ್ಯವನ್ನು ಪಾಲಿಸಿಕೊಂಡಿದ್ದ ಸೂರ್ಯವರ್ಮ ರಾಜನಿಗೆ ಬಹಳಕಾಲ ಮಕ್ಕಳಿಲ್ಲದೆ, ಕಡೆಗೆ ಒಬ್ಬಳು ಮಗಳು ಹುಟ್ಟಿದಳು. ಅವಳಿಗೆ ರೂಪವತಿ ಎಂದು ಹೆಸರಿಟ್ಟು ಅತ್ಯಂತ ಅಕ್ಕರೆಯಿಂದ ಬೆಳೆಸಿದರು. ಹೆಸರಿಗೆ ತಕ್ಕಂತೆ ರೂಪವತಿ ಪರಮ ಸುಂದರಿಯೂ ಹೌದು.

ಅವಳಿಗೆ ಮದುವೆಯಾಗುವ ವಯಸ್ಸು ಬಂದ ಮೇಲೆ ರಾಜನು ಅವಳ ಮದುವೆಯನ್ನು ಕುರಿತು ಆಲೋಚಿಸತೊಡಗಿದನು. ವರನನ್ನು ಹುಡುಕುತ್ತ ದೂರ ದೂರ ಹೋಗಬೇಕಾದ ಅಗತ್ಯವಿರಲಿಲ್ಲ. ರಾಜನ ಬಂಧು ವರ್ಗದಲ್ಲಿಯೇ ರೂಪವತಿಗೆ ತಕ್ಕವರಾದ ಮೂವರು ಯುವಕರಿದ್ದರು. ಒಬ್ಬನ ಹೆಸರು ಅಜಯ, ಇನ್ನೊಬ್ಬನು ವಿಜಯ, ಮೂರನೆಯವನು ಸುಧೀರ. ಆ ಮೂವರಿಗೂ ರೂಪವತಿಯನ್ನು ಮದುವೆಯಾಗಬೇಕೆಂದು ತುಂಬ ಆಶೆಯೂ ಇದ್ದಿತು.

ಸೂರ್ಯವರ್ಮ ರಾಜನು ಆ ಮೂವರನ್ನೂ ಕರೆಯಿಸಿ, "ನೀವು ಮೂವರೂ ಒಂದು ವರ್ಷದ ವರೆಗೆ ದೇಶಾಟನೆ ಮಾಡಿ, ರಾಜ್ಯದ ಕ್ಷೇಮಕ್ಕೆ ಉಪಯೋಗಪಡುವಂತಹ ವಿದ್ಯೆಗಳನ್ನು ಕಲಿತುಕೊಂಡು ಬನ್ನಿ. ನಿಮ್ಮಲ್ಲಿ ಯಾರ ವಿದ್ಯೆ ಹೆಚ್ಚಿನದೆಂದು ನನಗೆ ತೋರುವುದೋ ಅವರಿಗೆ ರೂಪವತಿಯನ್ನು ಕೊಟ್ಟು ಮದುವೆ ಮಾಡುತ್ತೇನೆ" ಎಂದನು.

ಅದಕ್ಕೆ ಒಪ್ಪಿಕೊಂಡು ಆ ಮೂವರೂ ಅವರವರ ದಾರಿ ಹಿಡಿದು ದೇಶ ಸಂಚಾರಕ್ಕೆ ಹೊರಟರು. ಒಂದು ವರ್ಷದ ಮೇಲೆ ಮೂವರೂ ಹಿಂದಿರುಗಿ ಬಂದರು. ರಾಜನು ಒಬ್ಬೊಬ್ಬನನ್ನೇ ಬೇರೆಬೇರೆಯಾಗಿ ಕರೆಯಿಸಿ ವಿಚಾರಿಸಿದನು.

ಅಜಯನು ರಾಜನೊಂದಿಗೆ, "ನಾನು ಒಂದು ಅದ್ಭುತವಾದ ಮಂತ್ರವನ್ನು ಕಲಿತುಕೊಂಡು ಬಂದಿದ್ದೇನೆ. ಆ ಮಂತ್ರವನ್ನು ಕ್ರಮ ಪ್ರಕಾರ ಜಪಿಸಿದರೆ ನಮಗೆ ಬೇಕಾದ ಸ್ಥಳದಲ್ಲಿ ಭೂಕಂಪ ಬರುತ್ತದೆ. ಶತ್ರುಗಳು ನಮ್ಮ ಮೇಲೆ ದಂಡೆತ್ತಿ ಬಂದಾಗ ಇದೊಂದೇ ಮಂತ್ರ ಸಾಕು" ಎಂದನು.

"ನಮ್ಮ ಕೆಲಸ ತೀರಿದ ಮೇಲೆ ಭೂಕಂಪವನ್ನು ನಿಲ್ಲಿಸಲು ತಕ್ಕ ಉಪಸಂಹಾರ ಮಂತ್ರವಿದೆಯೆ?" ಎಂದು ಕೇಳಿದ ರಾಜ. ಅಜಯನು ಮೋರೆ ಬಾಡಿಸಿಕೊಂಡು ಅದೇನೂ ಗೊತ್ತಿಲ್ಲವೆಂದನು. ಎರಡನೆಯವನಾದ ವಿಜಯನೂ ತಾನೊಂದು ಅಪೂರ್ವ ಮಂತ್ರ

ರಾಂಬಾಬು

ವನ್ನು ಕಲಿತು ಬಂದಿರುವೆನೆಂದನು. ಆ ಮಂತ್ರದಿಂದ ಭಾರಿ ಮಳೆ ಬಂದು ಭೂಮಿ ನೀರಿನಿಂದ ತುಂಬುತ್ತ ದಂತೆ. "ಹೌದು. ಜಲಪ್ರಳಯವಾಗದಂತೆ ಮಳೆ ಯನ್ನು ನಿಲ್ಲಿಸುವ ಮಂತ್ರವಿದೆಯೇ?" ಎಂದು ರಾಜನು ಕೇಳಿದನು. ಅದು ತನಗೆ ತಿಳಿಯದು ಎಂದನು ವಿಜಯ.

ಸುಧೀರನನ್ನು ವಿಚಾರಿಸಲು, ಅವನು ಯಾವ ಅಪೂರ್ವ ವಿದ್ಯೆಯನ್ನೂ ಕಲಿತುಕೊಂಡು ಬರಲೇ ಇಲ್ಲವಂತೆ. ಅದಕ್ಕೆ ಬದಲಾಗಿ ತಾನು ಒಂದು ವಿಷಯವನ್ನು ತಿಳಿದುಕೊಂಡು ಬಂದಿದ್ದೇನೆಂದನು. ಅದೇನೆಂದರೆ, ಸೂರ್ಯವರ್ಮ ರಾಜನ ಪರಿಪಾಲನೆ ಯಲ್ಲಿ ಎಷ್ಟೋ ಲೋಪಗಳಿರುವುದನ್ನು ಕಂಡನಂತೆ. ಪ್ರಜೆಗಳು ಅವುಗಳನ್ನು ಕುರಿತು ತುಂಬಾ ಹೇಳಿ ಕೊಳ್ಳುತ್ತಾರಂತೆ. ಅದರಂತೆ ದೇಶವು ಚೆನ್ನಾಗಿರಲು ತಾನು ಕೆಲವು ಆಲೋಚನೆ ಹೇಳಬಲ್ಲೆನೆಂದೂ ಸುಧೀರನೆಂದನು. ಸೂರ್ಯವರ್ಮನು ಸುಧೀರನ ಮಾತು ಕೇಳಿ ಕೋಪದಿಂದ "ಸಣ್ಣ ಪೋರ ನನಗೆ ಬುದ್ಧಿ ಹೇಳುವುದೆಂದರೇನು?" ಎಂದು ಬೈದು ಅವನನ್ನು ಕಾರಾಗೃಹದಲ್ಲಿಡಿಸಿದನು.

ತರುವಾಯ ಅವನು ಅಜಯನನ್ನೂ ವಿಜಯ ನನ್ನೂ ಕರೆದು "ನೀವು ಸಂಪಾದಿಸಿಕೊಂಡು ಬಂದ ವಿದ್ಯೆಗಳು ಅದ್ಭುತವೆನ್ನಲು ಸಂದೇಹವಿಲ್ಲ. ನಿಮ್ಮಿಬ್ಬ ರಲ್ಲಿ ಒಬ್ಬನನ್ನು ರೂಪವತಿ ಆರಿಸಿಕೊಳ್ಳುತ್ತಾಳೆ. ಈಗ ಈ ಪಾನೀಯವನ್ನು ಕುಡಿಯಿರಿ" ಎಂದು ತಾನೂ ತನ್ನ ಲೋಟವನ್ನು ಎತ್ತಿಕೊಂಡನು.

ಅಜಯ ವಿಜಯರು ತಮ್ಮ ಮುಂದಿದ್ದ ಪಾನೀಯ ವನ್ನು ಕುಡಿದ ಕೂಡಲೇ ಸತ್ತು ಬಿದ್ದರು. ಅವರ ಪಾನೀಯದಲ್ಲಿ ವಿಷವಿದ್ದುದನ್ನು ನೋಡಿ ಮಂತ್ರಿ, "ಮಹಾರಾಜರೇ! ಇದೆಂತಹ ದಾರುಣ!" ಎಂದನು.

"ಹೌದು ಹೌದು. ರಾಜ್ಯದ ಕ್ಷೇಮಕ್ಕೆ ಅನು ಕೂಲವಾಗುವ ವಿದ್ಯೆ ಕಲಿತುಕೊಂಡು ಬರಲು ಹೇಳಿ ದರೆ ಇವರಿಬ್ಬರೂ ಹಿರಣ್ಯಾಕ್ಷ ಹಿರಣ್ಯಕಶಿಪುಗಳಿಗಿಂತ ದಾರುಣವಾಗಿ ಪ್ರಪಂಚವನ್ನು ಸಂಕ್ಷೋಭಪಡಿಸು ವಂಥ ವಿದ್ಯೆಗಳನ್ನು ಕಲಿತು ಬಂದರು. ಇವರನ್ನು ನಿರ್ಮೂಲಿಸುವುದಕ್ಕಿಂತ ಹೆಚ್ಚಿನ ಉಪಕಾರ ಲೋಕ ಕ್ಕಿಲ್ಲ" ಎಂದನು ರಾಜ.

ಸೂರ್ಯವರ್ಮನು ಸುಧೀರನನ್ನು ಕಾರಾಗೃಹ ದಿಂದ ಕರೆಯಿಸಿ, "ನೀನು ಹೇಳಿದುದು ನಿಜವೇ. ನನ್ನ ಉದ್ದೇಶಕ್ಕೆ ತಕ್ಕಂತೆ ನಡೆದವನು ನೀನೇ. ನೀನು ಪರಿಪಾಲನೆಯನ್ನು ಸರಿಪಡಿಸುವಂತಹ ಮಾರ್ಗಗಳನ್ನೂ ಹೇಳುವುದಾದರೆ ರಾಜ್ಯವನ್ನು ಪಾಲಿಸಲಿಕ್ಕೆ ಕೂಡಾ ನೀನೇ ಅರ್ಹನೆಂದಾಯಿತು. ನಿನಗೇ ರೂಪವತಿಯನ್ನು ಕೊಟ್ಟು ಮದುವೆ ಮಾಡು ತ್ತೇನೆ" ಎಂದನು.



# ಮೋಸದ ಸ್ನೇಹ

**ರಾ**ಜಪ್ಪನೂ ಭೋಜಪ್ಪನೂ ಸ್ನೇಹಿತರೇ.

ಅವರೊಳಗಿನ ವ್ಯಾತ್ಯಾಸವೇನೆಂದರೆ, ಇಬ್ಬರ ಸಂಪಾದನೆಯೂ ಸಮಾನವಾಗಿದ್ದರೂ ಭೋಜಪ್ಪನಿಗಿರುವಂತಹ ತೃಪ್ತಿ ರಾಜಪ್ಪನಿಗಿರಲಿಲ್ಲ. ಒಂದು ಸಾರಿ ಭೋಜಪ್ಪ ರಾಜಪ್ಪನಿಗೆ ಹತ್ತು ರೂಪಾಯಿ ಕೈಗಡವಾಗಿ ಕೊಟ್ಟು, "ಬೇಕಾದಾಗ ಕೇಳುತ್ತೇನೆ" ಎಂದನು.

ಒಂದು ವರ್ಷ ಕಳೆದ ಮೇಲೆ ಭೋಜಪ್ಪನಿಗೆ ಹಣದ ಆಗತ್ಯ ಬಂದಿತು. ತನ್ನ ಹಣವನ್ನು ಕೊಡುವಂತೆ ರಾಜಪ್ಪನನ್ನು ಕೇಳಿದನು.

"ಎಂಥ ಹಣ? ಎಲ್ಲಿಯ ಹಣ? ನೀನು ನನಗೆ ಹಣ ಕೊಟ ನೆನಪೇ ನನಗಿಲ್ಲ. ಸಾಕ್ಷಿಗಳಿದ್ದರೆ ಕರೆ" ಎಂದ ರಾಜಪ್ಪ. ಸಾಕ್ಷಿಗಳಾರೂ ಇರಲಿಲ್ಲ.

ರಾಜಪ್ಪನ ಮೋಸದ ಬುದ್ಧಿ ಭೋಜಪ್ಪನಿಗೆ ಗೊತ್ತಾಯಿತು. ಅವನು ಗ್ರಾಮದ ಪಟೇಲರ ಬಳಿಗೆ ಹೋಗಿ ರಾಜಪ್ಪನ ಮೇಲೆ ಫಿರ್ಯಾದು ಮಾಡಿದನು. ಪಟೇಲರು ರಾಜಪ್ಪನನ್ನು ಕರೆಸಿ ವಿಚಾರಿಸಲು, ಭೋಜಪ್ಪ ತನ್ನ ಕೈಗೆ ಹಣವೇನೂ ಕೊಟ್ಟಿಲ್ಲ ಎಂದೇ ಹೇಳಿದನು.

"ಭೋಜಪ್ಪ ನಿನಗೆ ಹಣ ಕೊಡುವಾಗ ನೋಡಿದವರು ಇಪ್ಪತ್ತು ಮಂದಿ ಇದ್ದಾರೆ." ಎಂದರು ಪಟೇಲರು.

ರಾಜಪ್ಪ ತಬ್ಬಿಬ್ಬಾಗಿ "ಅದು ಹೇಗೇ? ಭೋಜಪ್ಪ ನನಗೆ ಹಣ ಕೊಡುವಾಗ ಅಲ್ಲಿ ಯಾರೂ ಇರಲಿಲ್ಲವಲ್ಲ?" ಎಂದು ಬಾಯಿಜಾರಿಸಿ ತನ್ನ ಮೋಸ ತಾನೇ ಒಪ್ಪಿಕೊಂಡನು.





# ತಾಯಿಮನಸು

ಕಾಂತಿಯ ಗಂಡ ಸುಂದರನು ಅಷ್ಟೇನೂ ಧನವಂತನಲ್ಲ. ಕಾಂತಿಯೂ ಸುಂದರನೂ ಸಂಕ್ರಾಂತಿ ಹಬ್ಬಕ್ಕೆ ಬರಲೇಬೇಕೆಂದು ಅವಳ ತಂದೆ ಕಾಗದ ಬರೆದಿದ್ದನು. ಸುಂದರನಿಗೆ ಕೆಲಸ ಕಾರ್ಯಗಳಲ್ಲಿ ತೀರಿಕೆ ಇಲ್ಲದೆ ಹೊರಡಲಾಗಲಿಲ್ಲ. ಕಾಂತಿಯೊಬ್ಬಳೇ ನಾಲ್ಕು ವರ್ಷಗಳ ಮೇಲೆ ಇದೀಗ ತೌರು ಮನೆಗೆ ಹೊರಟಿದ್ದಳು, ಮನಸ್ಸಿನಲ್ಲಿ ಏನೇನೋ ಸವಿಯಾದ ತೌರಿನ ಆಲೋಚನೆಗಳು ಒಂದರ ಹಿಂದೊಂದಾಗಿ ಬರುತ್ತಿದ್ದುವು.

ಕಾಂತಿಯ ಅಕ್ಕಂದಿರಿಗೆ ಧನಿಕರಾದ ಗಂಡಂದಿರೇ ದೊರಕಿದ್ದರು, ಕಾಂತಿಯ ಗಂಡ ಸಾಧಾರಣದ ಪರಿಸ್ಥಿತಿಯವನು. ಆದರೂ ಕಾಂತಿ ಮದುವೆಯಾಗಿ ಗಂಡನ ಮನೆಗೆ ಬಂದು, ಪ್ರಥಮಬಾರಿಯಾಗಿ ತೌರಿಗೆ ಹೋಗುವವಳಾದುರಿಂದ, ತನ್ನ ತಂದೆಗೆ ಒಂದು ಪಂಚೆಯನ್ನೂ, ತಾಯಿಗೆ ಒಂದು ರವಿಕೆ ಕಣವನೂ ಕೊಂಡುಕೊಂಡಿದ್ದಳು.

ಅವಳು ತೌರುಮನೆಗೆ ಬಂದ ಕೂಡಲೇ ತಾಯಿ ಇದಿರಾಗಿ ಬಂದು ಸಂತೋಷದಿಂದ ಸ್ವಾಗತಿಸುತ್ತ ಆಲಿಂಗಿಸಿ ಕೈಹಿಡಿದು ಕರೆಕೊಳ್ಳುವಳೆಂದರೆ, ಹಾಗೇನೂ ಆಗಲಿಲ್ಲ. ತಾಯಿ ಅವಳನ್ನು ನೋಡಿ "ಬಂದೆಯಾ ಕಾಂತೀ, ಬಾ" ಎಂದಷ್ಟೇ ಹೇಳಿ ತನ್ನಪಾಡಿಗೆ ತನ್ನ ಕೆಲಸ ನೋಡಿಕೊಳ್ಳುವುದರಲ್ಲಿ ಮಗ್ನಳಾದಳು. ಅವಳ ಅಕ್ಕಂದಿರು ಜಗಜಗಿಸುವ ಸೀರೆ ಆಭರಣಗಳಿಂದ ಬೆಳಗುತ್ತ ತಾಯಿಯ ಸುತ್ತಲೂ ಸೇರಿ, ತಮ್ಮ ನಗರದ ವಿಶೇಷಗಳನ್ನು ಹೇಳುತ್ತಿದ್ದರು. ಅವರೂ ಆ ದಿನವೇ ಅಲ್ಲಿಗೆ ಬಂದಿದ್ದರು. ಅವರ ಸಂಭ್ರಮ ಸಡಗರದಲ್ಲಿ ಕಾಂತಿ ಬಂದ ಲೆಕ್ಕವೇ ಇರಲಿಲ್ಲ.

ಅವರು ಕಾಂತಿಯನ್ನು ನೋಡಿ "ಏನೇ, ಕಾಂತೀ, ನಿನ್ನ ಯಜಮಾನರ ಸಂಪಾದನೆ ಏನಾದರೂ ಏರಿದೆಯೋ ? ನಿನ್ನ ಹೊಟ್ಟೆ ಬಟ್ಟೆಗೇನೂ ಕಡಮೆ ಮಾಡೋದಿಲ್ಲಷ್ಟೇ ?" ಎನ್ನುತ್ತ ಕಿಲಕಿಲನೆ ನಕ್ಕರು. "ಪಾಪ ಕಾಂತಿ !" ಎಂಬ ಕೊಂಕುನುಡಿ ಬೇರೆ !

ಕಾಂತಿಯ ಮನಸ್ಸಿಗೆ ಚಿವುಟಿದ ಹಾಗಾಯಿತು. ಆದರೂ ಕಿರುನಗುವನ್ನು ತಂದುಕೊಂಡು ಅವರ ಪ್ರಶ್ನೆಗಳಿಗೆ ತೇಲಿಕೆಯ ಉತ್ತರ ಹೇಳುತ್ತ ಕೈಕಾಲು ತೊಳೆದುಕೊಂಡು ಬಂದು ಕುಳಿತಳು.

ತಾನು ಹುಟ್ಟಿದ ಮನೆಯಾದ ಇಲ್ಲಿ ಅಭಿಮಾನ ತಂದುಕೊಳ್ಳುವುದರಿಂದ ಪ್ರಯೋಜನವಿಲ್ಲವೆಂದು

ಎಂ. ವಿ. ಸತ್ಯನಾರಾಯಣ

ಅವಳಿಗೆ ತೋರಿತು. ತಿಂಡಿ ಊಟಗಳ ವೇಳೆಯಲ್ಲಿ ಕಾಂತಿಯ ಅಕ್ಕಂದಿರು ತಮಗೆ ಪ್ರಿಯವಾದ ಭಕ್ಷ್ಯಗಳನ್ನು ಕೇಳಿ ಕೇಳಿ ಹಾಕಿಸಿಕೊಂಡು ತಿಂದರು. ಅವರಷ್ಟು ಸ್ವತಂತ್ರವಾಗಿ ಕೇಳಲು ಕಾಂತಿಗೆ ದಾಕ್ಷಿಣ್ಯವಾಯಿತು. ಕೇಳದಿದ್ದುದೇ ಒಳ್ಳೆಯದಾಯಿತೆನ್ನಬೇಕು. ಏಕೆಂದರೆ ಅವಳ ತಾಯಿ ತನ್ನ ಹಿರಿಯ ಮಗಳಂದಿರಿಗೆ, ಲಡ್ಡು ಮೊದಲಾದುವನ್ನು ಮತ್ತೆ ಮತ್ತೆ ಕೇಳಿ ಕೇಳಿ ಬಡಿಸುವಾಗ "ನಿನಗೂ ಹಾಕಲೇ ?" ಎಂದು ಕಾಂತಿಯನ್ನು ಕೇಳಲು ಸಹಾ ಇಲ್ಲ. ಆದುದರಿಂದ ಕಾಂತಿಯ ಪಾಲಿಗೆ ಲಡ್ಡು ಕಹಿಯೇ ಸರಿ !

ಹಬ್ಬದ ದಿನ ಎಲ್ಲರೂ ನೀರೆರೆದುಕೊಂಡ ಮೇಲೆ ಕಾಂತಿಯೂ ಏನೋ ಅರ್ಧಂಬರ್ಧ ಸ್ನಾನ ಮಾಡಿ ನೀರೆರೆದುಕೊಂಡ ಶಾಸ್ತ್ರ ಮುಗಿಸಿದಳು. ರಾತ್ರಿ ಮಲಗಲು ಅಕ್ಕಂದಿರಿಗೆಲ್ಲ ಮಂಚ ಹಾಸಿಗೆ ಮೊದಲಾದ ಉಪಚಾರಗಳಾದರೆ ಕಾಂತಿಗೆ ಸೆರಗೇ ಹಾಸಿಗೆಯಾಗಿ, ಕೈಯೇ ತಲೆದಿಂಬಾಯಿತು.

ಅವಳು ತನ್ನ ತಂದೆಗಾಗಿ ಕೊಂಡುಕೊಂಡ ಪಂಚೆಯನ್ನು ಹೊರಗೆ ತೆಗೆದು ಯಾರಿಗೂ ಗೊತ್ತಾಗದಂತೆ ತಂದೆಗೆ ಕೊಟ್ಟು ಅಡ್ಡಬಿದ್ದಳು. "ಆಯಿತು. ಸಂತೋಷ. ಎಲ್ಲರೂ ಊಟಕ್ಕೆ ಕೂತ ಹಾಗಿದೆ. ನೀನೂ ಹೋಗಿ ಊಟ ಮಾಡು" ಎಂದು ಹೇಳಿ ತಂದೆ. ಅವಳು ಕೊಟ್ಟ ಪಂಚೆಯನ್ನು ಕೋಲಿನ ಮೇಲೆ ಹಾಕಿ ಆಚೆಗೆ ಹೊರಟುಹೋದನು.

ಕಾಂತಿ ನಿರಾಶೆಯಿಂದ ಆ ಪಂಚೆಯನ್ನೇ ನೋಡುತ್ತಿರಲು, ಏನೋ ಕೆಲಸದ ನಿಮಿತ್ತ ತಾಯಿ ಅಲ್ಲಿಗೆ ಬಂದಳು. ತಾಯಿಗಾಗಿ ತಾನು ತಂದ ರವಿಕೆಕಣವನ್ನು ತೆಗೆಯೋಣವೆಂದುಕೊಂಡಾಗ, ತಾಯಿಯ ಕೈಯಲ್ಲಿ ಒಂದು ಪಟ್ಟೆಸೀರೆ ಇರುವುದನ್ನು ನೋಡಿದಳು. ಕಾಂತಿಯ ತಾಯಿ ಆ ಪಟ್ಟೆಸೀರೆಯನ್ನು ತನ್ನ ಪೆಟ್ಟಿಗೆಯೊಳಗೆ ಭದ್ರವಾಗಿಟ್ಟಳು. ಕಾಂತಿಯನ್ನು ಅವಳು ಸ್ವಲ್ಪವೂ ಲಕ್ಷಿಸಿದಂತೆ ಕಾಣಲಿಲ್ಲ. ದುಃಖವನ್ನು ನುಂಗಿಕೊಳ್ಳುತ್ತ ಕಾಂತಿ ತಾನು ತಂದ ಉಡುಗೊರೆಯನ್ನು ಎತ್ತಿ, "ಅಮ್ಮಾ, ನಿನಗಾಗಿ ತಂದೆ!"



ಎನ್ನುತ್ತ ರವಿಕೆಕಣವನ್ನು ತಾಯಿಗೆ ಕೊಟ್ಟಳು. ತಾಯಿ ಅದನ್ನು ತೆಗೆದುಕೊಂಡು, ಕಣ್ಣೆತ್ತಿಯೂ ನೋಡದೆ ಕೋಲಿನ ಮೇಲೆ ಬೀಳುವಂತೆ ಎಸೆದಳು. ತಾಯಿ ತನ್ನನ್ನೇ ಎತ್ತಿ ಕುಪ್ಪೆಗೆ ಬಿಸುಟ ಹಾಗೆ ಕಾಂತಿಗೆ ಎನಿಸಿತು.

ಆಮೇಲೆ ತಾಯಿ ಆ ರವಿಕೆಬಟ್ಟೆಯನ್ನು ಅಗಸರ ವಳಿಗೆ ಕೊಟ್ಟುದನ್ನೂ, ತಂದೆಗೆ ತಾನು ತಂದ ಪಂಚೆ ಯನ್ನು ಯಾವನಿಗೋ ಕೊಟ್ಟುದನ್ನೂ ಕಾಂತಿ ಗಮ ನಿಸದಿರಲಿಲ್ಲ. ಆಗ ಅವಳು ಯಾವುದೋ ನೆವನದಲ್ಲಿ ಬಚ್ಚಲು ಕೋಣೆಗೆ ಹೋಗಿ, ಹೊಟ್ಟೆ ಹಗುರಾಗು ವಷ್ಟು ಅತ್ತು ಮುಖ ತೊಳೆದುಕೊಂಡು ಬಂದಳು.

ತನ್ನ ತೌರುಮನೆಯಲ್ಲಿ ತಾನು ಪೂರ್ತಿಪರಕೀಯ ಳಾದೆನೆಂಬ ಭಾವನೆ ಕಾಂತಿಯಲ್ಲಿ ಬಲವಾಗಿ ನಾಟಿತು. ಅವಳು ಅಲ್ಲಿ ಹೆಚ್ಚುದಿನ ಇರಲಾಗದೆ, ಹಬ್ಬ ಮುಗಿದ ಮರುದಿನವೇ, ತಂದೆ, ತಾಯಿ, ಅಕ್ಕಂದಿ ರೆಲ್ಲರ ಹತ್ತಿರ ಹೇಳಿಕೊಂಡು ತನ್ನ ಊರಿಗೆ ಹೊರಟುಬಿಟ್ಟಳು. ಎರಡುದಿನ ಇದ್ದು ಹೋಗೆಂದು ಕೂಡಾ ಯಾರೂ ಅವಳಿಗೆ ಹೇಳಲಿಲ್ಲ.

ತನ್ನ ಗಂಡನನ್ನು ನೋಡಿದ ಕೂಡಲೇ ಅವಳಿಗೆ ದುಃಖದ ಕಟ್ಟೆ ಒಡೆದಂತೆ ಅಳು ಬಂದುಬಿಟ್ಟಿತು. ಅಳುತ್ತಾ ತನಗೆ ತೌರುಮನೆಯಲ್ಲಿ ನಡೆದ ಅವ ಮಾನವನ್ನೆಲ್ಲಾ ಗಂಡನಿಗೆ ವಿವರಿಸಿ ಹೇಳಿದಳು.

"ಅದನ್ನೆಲ್ಲ ದೊಡ್ಡದಾಗಿ ಹಚ್ಚಿಕೊಳ್ಳಬಾರದು ಬಿಡೂ" ಎಂದು ಸುಂದರನು ಸಮಾಧಾನ ಹೇಳಿ, ಅವಳು ತಂದ ಗಂಟನ್ನು ಬಿಚ್ಚಿದನು.

ಅದರಲ್ಲಿ ಕಾಂತಿಯ ಬಟ್ಟೆಗಳ ಅಡಿಯಲ್ಲಿ ಪಟ್ಟೆ ಸೀರೆಯೂ, ಡಬ್ಬಿಯಲ್ಲಿ ಲಡ್ಡುಗಳೂ, ಒಂದು ಚೀಟಿಯೂ ಇದ್ದುವು. ಅವನು ಚೀಟಿಯನ್ನು ಓದಿ ಕಾಂತಿಗೆ ಕೊಟ್ಟನು. ಅದರಲ್ಲಿ ಹೀಗಿತ್ತು;

"ಕಾಂತೀ, ನನ್ನನ್ನು ಕ್ಷಮಿಸಿಬಿಡಮ್ಮ. ನಾಲ್ಕು ವರ್ಷಗಳಿಂದ ನಮ್ಮ ಹೊಲವೆಲ್ಲಾ ಬೀಳುಬಿದ್ದು ಹೋಗಿ ಆದಾಯವಿಲ್ಲ. ಬಹಳ ಬಡತನದಲ್ಲಿದ್ದೇವೆ. ನಿನ್ನ ಅಕ್ಕಂದಿರು ಅವರ ಗಂಡಂದಿರಿಗೆ ತಿಳಿಯದಂತೆ ನಮ್ಮ ಕುಟುಂಬವನ್ನು ಪೋಷಿಸುತ್ತಿದ್ದಾರೆ. ನಿನ್ನನ್ನು ನಿನ್ನ ಅಕ್ಕಂದಿರ ಸರಿಸಮನಾಗಿ ಆದರಿಸಿಬಿಟ್ಟರೆ ನಮ್ಮ ಆಧಾರಕ್ಕೆ ಭಂಗಬರುತ್ತೇನೋ ಅಂತ ಹೆದರಿದೆವು ನೀನು ಕಷ್ಟದ ಪರಿಸ್ಥಿತಿಯಲ್ಲಿ ಕೂಡಾ ನನಗೂ ಅಪ. ನಿಗೂ ಉಡುಗೊರೆ ತಂದೆಯೆಂದರೆ ಅದು ನಿನ್ನ ಒಳ್ಳೆಯ ಮನಸ್ಸನ್ನು ತೋರಿಸುತ್ತದೆ. ಸ್ವಲ್ಪ ಗರ್ವಿಷ್ಠೆಗಳಾದ ನಿನ್ನ ಅಕ್ಕಂದಿರನ್ನು ತೃಪ್ತಿ ಪಡಿಸ ಲಿಕ್ಕಾಗಿಯೇ ಅವುಗಳನ್ನು ಯಾರಿಗೋ ಕೊಟ್ಟ ಹಾಗೆ ನಟಿಸಿದೆವು. ನಿನ್ನ ಅಕ್ಕಂದಿರು ಹೊರಟು ಹೋದ ಕೂಡಲೇ ಅವು ನಮ್ಮ ಹತ್ತಿರಬರುತ್ತವೆ. ನೀವಿಬ್ಬರೂ ಕ್ಷೇಮವಾಗಿರಿ—ನಿನ್ನ ಅಮ್ಮ"





# ಮಂತ್ರರಹಸ್ಯ

ರುದ್ರಪುರದ ರಾಜನಾದ ಜಯಪಾಲನಿಗೆ ಪರಮ ಸುಂದರಿಯಾದ ರೂಪವತಿ ಎಂಬವಳು ಹೆಂಡತಿ ಯಾಗಿದ್ದಳು. ರೂಪವತಿಯ ಹತ್ತಿರ ಅಪೂರ್ವ ವಾದೊಂದು ಗುಲಾಬಿರಂಗಿನ ಮುತ್ತಿನ ಹಾರವಿತ್ತು. ಅದರ ಮೇಲೆ ಆವಳಿಗೆ ತುಂಬ ಪ್ರೀತಿ. ಅದನ್ನು ಅವಳು ಯಾವಾಗಲೂ ಧರಿಸಿಕೊಂಡಿರುವಳು. ರಾತ್ರಿ ಯಲ್ಲಿ ನಿದ್ದೆ ಮಾಡುವುದಕ್ಕೆ ಮೊದಲು ಆ ಮುತ್ತಿನ ಹಾರವನ್ನು ತೆಗೆದು ತನ್ನ ತಲೆ ದಿಂಬಿನ ಕೆಳಗೆ ಅಡಗಿ ಸಿಡುತ್ತಿದ್ದಳು. ನಿದ್ದೆಯಲ್ಲಿ ಅದೇನಾದರೂ ಕೈ ಮೈಗಳ ಹೊರಳಾಟದಿಂದ ಹಾಳಾಗಿ ಹೋದೀತೆಂದು ಅವಳಿಗೆ ಭಯ; ಅಷ್ಟು ಅಭಿಮಾನ ಅದರ ಮೇಲೆ.

ಜಯಪಾಲನಿಗೆ ಶಕ್ತಿಪಾಲನೆಂಬ ಮಗನಿದ್ದನು. ಅವನಿಗೆ ಹತ್ತನೆಯ ವಯಸ್ಸು ನಡೆಯುತ್ತಿದ್ದಿತು. ರಾಜನ ಪರಿಪಾಲನೆ ಚೆನ್ನಾಗಿದ್ದುದರಿಂದ ಪ್ರಜೆಗಳು ಸುಖ ಸಂತೋಷಗಳಿಂದ ರಾಜನನ್ನು ಗೌರವಿಸಿ ಕೊಂಡಿದ್ದರು.

ಹೀಗಿರುವಾಗ ಒಂದು ದಿನ ರಾಜನು ಸಪರಿವಾರ ನಾಗಿ ಬೇಟೆಯಾಡಲು ಅರಣ್ಯಕ್ಕೆ ಹೊರಟನು. ಆಗಾಗ ಬೇಟೆ ಯಾಡುವುದೂ ಆ ರಾಜನ ಪದ್ಧತಿ ಯಾಗಿತ್ತು. ಆದರೆ ಈಸಾರಿ ಹೊರಟ ಬೇಟೆ ಯಲ್ಲಿಯೇ ಅವನಿಗೆ ಕಷ್ಟಗಳು ಪ್ರಾರಂಭವಾದುವು. ಮಧ್ಯಾಹ್ನದವರೆಗೆ ಬೇಟೆ ಚೆನ್ನಾಗಿಯೇ ಸಾಗಿತು. ನಡು ಮಧ್ಯಾಹ್ನದಲ್ಲಿ ಎಲ್ಲರೂ ಆಹಾರ ಸೇವನೆ ಮುಗಿಸಿ ವಿಶ್ರಾಂತಿಯಲ್ಲಿರುವಾಗ ಇದ್ದಕ್ಕಿದ್ದ ಹಾಗೆ, ಅತಿ ದಾರುಣವಾದ ತುಫಾನು ಅರಣ್ಯದೊಳಗೆ ಬಂದು ಬಿದ್ದಿತು. ಈ ಭಯಂಕರ ತುಫಾನಿನ ರಭಸದಿಂದ ಬೇಟೆಯಾಡಲು ತಂದಿದ್ದ ಆನೆಗಳೂ ಕುದುರೆಗಳೂ ಕಂಡಾ ಬಟ್ಟೆ ಓಡತೊಡಗಿದುವು. ರಾಜನು ಏರಿದ ರಥವು ಒಂದು ಮರಕ್ಕೆ ಬಡೆದು, ಅದರ ಒಂದು ಚಕ್ರ ಮುರಿದು ರಥ ಮಗುಚಿತು. ಕೂಡಲೇ ಜಯ ಪಾಲನು ಒಂದು ಕುದುರೆಯ ಮೇಲೆ ಏರಿದನು. ಅದು ಹಿಡಿತ ತಪ್ಪಿ ಇಷ್ಟ ಬಂದಂತೆ ದಿಕ್ಕು ದಾರಿ ಯಿಲ್ಲದೆ ಓಡತೊಡಗಿತು. ಆಗ ನೆಲದ ಕಡೆಗೆ ಚಾಚಿ ಕೊಂಡಿದ್ದ ಒಂದು ಮರದಕೊಂಬೆ ರಾಜನ ಹಣೆಗೆ ಬಲವಾಗಿ ತಾಗಿ, ಗಾಯವಾಗಿ ರಕ್ತ ಸುರಿಯ ತೊಡಗಿತು. ಅವನು ಕೆಳಗೆ ಬಿದ್ದು. ಕಾಲು ನಡಿಗೆ ಯಿಂದ ಒಂದು ನದಿಯ ಬಳಿಗೆ ಬಂದನು. ಧಾರಾ ಪಾತವಾಗಿ ಸುರಿದ ಮಳೆಯಿಂದ ನದಿ ಉಕ್ಕಿ ಸೆಳೆತ

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು



ದೊಂದಿಗೆ ಹರಿಯುತ್ತಿರಲು, ರಾಜನು ಕಾಲು ಜಾರಿ ನದಿಗೆ ಬಿದ್ದನು. ಅವನಿಗೆ ಈಜು ಬಂದರೂ ಹಣೆಯಿಂದ ತುಂಬಾ ರಕ್ತಸ್ರಾವವಾಗಿ ಶಕ್ತಿ ಕುಂದಿ ಹೋದುದರಿಂದ ಪ್ರವಾಹದೊಂದಿಗೆ ಹೊಡೆದು ಕೊಂಡು ಹೋಗುತ್ತಾ ಸ್ಮೃಹೆಯಿಲ್ಲದೆ ಹೋದನು.

ಮತ್ತೆ ಅವನಿಗೆ ಎಚ್ಚರವಾದಾಗ ಅವನ ತಲೆ ಸ್ವಲ್ಪ ನೋಯುತ್ತಿದ್ದಿತು. ಸುಂದರಿಯಾದೊಬ್ಬಳು ಹುಡುಗಿ ಅವನ ಕಾಲುಗಳನ್ನು ಹಿತವಾಗಿ ಒತ್ತಿ ಕೊಂಡಿದ್ದಳು.

ಅವನು ಕಣ್ಣು ತೆರೆದುದನ್ನು ನೋಡಿ ಅವಳು ತೃಪ್ತಿಯಿಂದ ನಗುವನ್ನು ಸೂಸಿ, "ಅಬ್ಬಾ ! ಮತ್ತೆ ಈ ಪ್ರಪಂಚಕ್ಕೆ ಬಂದಿರೆಂದಾಯಿತು. ನಾಲ್ಕು ದಿನಗಳಿಂದ ನಿಮ್ಮನ್ನು ಕುರಿತು ತುಂಬಾ ಕಳವಳದಲ್ಲಿದ್ದೇವೆ. ನಮ್ಮ ರೇವಿನ ಬದಿಯಲ್ಲಿ ನೀವು ಬಿದ್ದಿದ್ದಿರಿ. ನೀವು ಈಗ ಮಲಗಿರುವುದು ಸೋಣಪುರದ ಅರಣ್ಯದ ರಾಜರಾದ ಫಕೀರಾ ಅವರ ಮನೆಯಲ್ಲಿ, ನಾನು ರಾಜವೈದ್ಯರ ಮಗಳು ಮಂಜರಿ. ನೀವು ಪೂರ್ತಿ ಗುಣಮುಖರಾಗಲು ಕಡೇ ಪಕ್ಷ ಒಂದು ತಿಂಗಳು ಬೇಕು. ನನ್ನ ತಂದೆಯವರು ಕೊಡುವ ಮೂಲಿಕೆಗಳಿಂದ ನಿಮ್ಮ ಆರೋಗ್ಯ ಸರಿಯಾಗಿ ಬಿಡುತ್ತದೆ. ನಿಮಗೆ ಬೇಕಾದುದನ್ನು ನೋಡಿಕೊಳ್ಳಲು ನಾನು ರಾತ್ರೀ ಹಗಲೂ ನಿಮ್ಮ ಬಳಿಯಲ್ಲೇ ಇರುತ್ತೇನೆ. ಯಾವ ಕಾರಣದಿಂದಲೋ ನಿಮ್ಮನ್ನು ನೋಡಿದ ಕ್ಷಣದಿಂದಲೂ ನನ್ನ ಮನಸ್ಸು ನಿಮ್ಮ ವಶವಾಗಿಬಿಟ್ಟಿತು. ಆದುದರಿಂದಲೇ ನಿಮ್ಮ ಶುಶ್ರೂಷೆಯನ್ನು ನಾನೇ ಸ್ವಂತವಾಗಿ ಮಾಡುತ್ತಿದ್ದೇನೆ. ಆದರೆ ನೀವು ಯಾರು ಏನೆಂಬುದೊಂದೂ ನಮಗೆ ತಿಳಿಯಲಿಲ್ಲ. ಅದು ಗೊತ್ತಾಗಿದ್ದರೆ ನಿಮ್ಮನ್ನು ನಿಮ್ಮವರ ಬಳಿಗೆ ಕಳುಹಿಸಿಬಿಡುತ್ತಿದ್ದೆವು" ಎಂದಳು.

ಆಗ ಮಂಜರಿಯ ತಂದೆಯೂ ಫಕೀರಾ ರಾಜನೂ ಅಲ್ಲಿಗೆ ಬಂದರು. ಫಕೀರಾ ಎಚ್ಚರದಲ್ಲಿರುವ ರೋಗಿಯನ್ನು ನೋಡಿ, "ನೀನು ಯಾರೆಂದು ಹೇಳಿದರೆ ನಿನ್ನನ್ನು ನಿನ್ನ ಮನೆಗೆ ಕಳುಹಿಸುತ್ತೇನೆ" ಎಂದನು.

ತನ್ನ ನಿಜ ಸಂಗತಿಯನ್ನು ಹೇಳುವುದರಿಂದ ಏನಾದರೂ ಅಪಾಯ ಬರಬಹುದೆಂದು ಶಂಕಿಸಿ ಜಯಪಾಲನು, "ನನ್ನ ತಂದೆ ವಿಕ್ರಮಪುರಕ್ಕೆ ಸೇರಿದ ಒಬ್ಬರು ವರ್ತಕರು. ನಾನು ಒಂದು ಕೆಲಸದ ಮೇಲೆ ಪ್ರಯಾಣ ಹೊರಟಿದ್ದೆ. ದಾರಿಯಲ್ಲಿ ಕಷ್ಟಗಳಿಗೆ ಬಿದ್ದು ಹೀಗಾದೆ" ಎಂದನು.

ಫಕೀರಾ ಮೊದಲಾದವರು ಅವನ ಮಾತನ್ನು ನಂಬಿದರು. ಅವನು ಕೆಲವು ದಿನ ಅಲ್ಲಿದ್ದು ಚಿಕಿತ್ಸೆ ಪಡೆಯಲು ಒಪ್ಪಿದನು. ಆದರೆ ಅವನು ಫಕೀರಾ ರಾಜನ ಅನುಮತಿ ಪಡೆಯದೆ ಹೋಗಕೂಡದಂತೆ. ಮಂಜರಿ ದಿನದಿಂದ ದಿನಕ್ಕೆ ಅವನಿಗೆ ಸನ್ನಿಹಿತಳಾಗುತ್ತಾ ಬರುತ್ತಿದ್ದಳು. ಅವಳು ಮಾಡುವ ಸೇವೆಗಳಿಗೆ ಅವನ ಹೃದಯವು ಕೃತಜ್ಞತೆಯಿಂದ ತುಂಬಿ ಹೋಯಿತು. ಅವಳ ಋಣವನ್ನು ಹೇಗೆ ತೀರಿಸುವು

ದೆಂದು ಅವನಿಗೆ ಅರ್ಥವಾಗಲಿಲ್ಲ. ತಾನು ಅಲ್ಲಿಂದ ತಪ್ಪಿಸಿಕೊಂಡು ಹೋಗಬೇಕೆಂದರೆ ತನಗೆ ಸಹಾಯ ಮಾಡುವವಳು ಮಂಜರಿಯೊಬ್ಬಳೇ ಎಂದೂ ಅವನಿಗೆ ಗೊತ್ತಾಯಿತು. ಅವಳು ಅವನನ್ನು ಗಾಢವಾಗಿ ಪ್ರೇಮಿಸುವಳೆಂಬುದಕ್ಕೆ ಅನೇಕ ನಿದರ್ಶನಗಳು ಕಂಡು ಬಂದುವು. ಆದರೆ ಅವನು ತಪ್ಪಿಸಿಕೊಂಡು ಹೋದರೆ ಮಂಜರಿ ಅಪಾಯದಲ್ಲಿ ಬೀಳುತ್ತಾಳೆ. ಮಂಜರಿಗೆ ಅಭ್ಯಂತರವಿಲ್ಲದ ಪಕ್ಷದಲ್ಲಿ ಅವನು ಅವಳನ್ನು ತನ್ನೊಂದಿಗೆ ರುದ್ರಪುರಕ್ಕೆ ಕರೆದುಕೊಂಡು ಹೋಗ ಬಹುದಾಗಿತ್ತು. ತಾನು ಇವಳನ್ನು ಮದುವೆ ಮಾಡಿ ಕೊಳ್ಳಲು, ಪರಿಸ್ಥಿತಿಯನ್ನು ನೋಡಿ ರೂಪವತಿ ಕೂಡಾ ಒಪ್ಪಿಗೆ ಕೊಡಬಹುದು.

ಜಯಪಾಲನು ಮೊದಲಿನಂತೆ ಆರೋಗ್ಯ ಪಡೆದ ಮೇಲೆ ಮಂಜರಿಯೊಂದಿಗೆ "ನಾನಿನ್ನು ಹೊರಡ ಬೇಕು. ನನಗೆ ಬೇರೆ ಜೀವಿತವಿದೆ. ಇಲ್ಲಿಯ ನಿಮ್ಮ ಜೀವನದೊಂದಿಗೆ ಸೇರಿಕೊಳ್ಳಲು ನನಗೆ ಸಾಧ್ಯ ವಾಗದು. ನಾನು ಗುಟ್ಟಾಗಿ ಹೊರಟುಹೋಗಲು ನಿನ್ನ ಸಹಾಯವೂ ಬೇಕು. ನಿನ ತಂದೆಯಾದರೋ ನನ ನ್ನು ಇಲ್ಲಿಯೇ ಇರಬೇಕೆಂದು ಒತ್ತಾಯಿ ಸುತ್ತಿದ್ದಾನೆ. ಆದುದರಿಂದ ನಾನು ಗುಟ್ಟಾಗಿ ಹೊರಟುಹೋದರೆ ನೀನು ನಿನ್ನ ತಂದೆಯು ಮತ್ತು ರಾಜನ ಕೋಪಕ್ಕೆ ಗುರಿಯಾಗುವೆ. ನಿನಗೆಂತಹ ಶಿಕ್ಷೆ ಕೊಡುವರೋ ಎಂದು ಚಿಂತೆಯಾಗಿದೆ" ಎಂದನು.

"ನನ್ನನ್ನು ಚಿತ್ರವಧೆ ಬೇಕಾದರೂ ಮಾಡಲಿ. ನಾನು ಸಂತೋಷವಾಗಿ ಆ ಶಿಕ್ಷೆಯನ್ನು ಅನುಭವಿ ಸುತ್ತೇನೆ. ನಾನು ನಿಮ್ಮನ್ನು ತುಂಬಾ ಪ್ರೇಮಿಸಿದೆ. ನೀವು ನಿಮ್ಮವರೊಂದಿಗೆ ಸುಖವಾಗಿರುವುದೇ ನನಗೆ ಬೇಕಾದುದು" ಎಂದಳು ಮಂಜರಿ.

"ಮಂಜರೀ, ನಾನು ಪಶುವಲ್ಲ, ಮನುಷ್ಯ. ನೀನು ನನ್ನನ್ನು ಪ್ರೇಮಿಸಿದರೆ ನಾನೂ ನಿನ್ನನ್ನು ಪ್ರೇಮಿ ಸುತ್ತೇನೆ. ನೀನು ಕೂಡಾ ನನ್ನೊಂದಿಗೆ ನಮ್ಮ ದೇಶಕ್ಕೆ ಬಂದುಬಿಡು. ನನ್ನ ಹೆಂಡತಿಯ ಅನುಮತಿಯೊಂದಿಗೆ, ನಮ್ಮ ಆಚಾರದ ಪ್ರಕಾರ ನಿನ್ನನ್ನು ಮದುವೆ ಮಾಡಿ ಕೊಳ್ಳುತ್ತೇನೆ. ನಿನಗೇನಾದರೂ ಅಭ್ಯಂತರ ವಿದೆಯೋ





ಮಂಜರೀ ?" ಎಂದು ಕೇಳಿದನು ಜಯಪಾಲ. ಅಭ್ಯಂತರವೇನಿಲ್ಲವೆಂದು ಮಂಜರಿ ಅವನ ಇಷ್ಟದಂತೆ ನಡೆಯಲು ಸಂತೋಷದಿಂದ ಒಪ್ಪಿದಳು. ಆ ದಿನ ಮಧ್ಯರಾತ್ರಿಯಲ್ಲಿ ಇಬ್ಬರೂ ಅಲ್ಲಿಂದ ಹೊರಟರು. ಬಹಳ ಕಷ್ಟಪಟ್ಟು ಪ್ರಯಾಣ ಮಾಡುತ್ತ ರುದ್ರಪುರವನ್ನು ಸೇರಿದ ಮೇಲೆ ಜಯಪಾಲನು "ಮಂಜರೀ, ನಿನ್ನೊಂದಿಗೆ ಇಷ್ಟುದಿನ ಸತ್ಯ ಹೇಳದಿರುವುದಕ್ಕೆ ಕ್ಷಮಿಸು. ನಾನು ಈ ರುದ್ರಪುರಕ್ಕೆ ರಾಜ" ಎಂದನು.

"ಹಾಗಾದರೆ ಪ್ರಭುಗಳೇ, ನಾನೇನಾದರೂ ಅಪಚಾರ ಮಾಡಿದ್ದರೆ ಕ್ಷಮಿಸಬೇಕು" ಎಂದಳು ಮಂಜರಿ.

ಅರಮನೆಗೆ ಹೋದ ಮೇಲೆ ಜಯಪಾಲನು ಮಂಜರಿಯನ್ನು ವಿವಾಹ ಮಾಡಿಕೊಳ್ಳಲು ರೂಪಮತಿಯ ಅನುಮತಿಯನ್ನು ಪಡೆದನು. ರೂಪಮತಿ ಇಷ್ಟವಿಲ್ಲದೆಯೇ ಅವರ ವಿವಾಹಕ್ಕೆ ಒಪ್ಪಿಗೆ ಕೊಟ್ಟಳು. ಮದುವೆಯೂ ಆಯಿತು.

ಅರಣ್ಯದಲ್ಲಿದ್ದರೂ ನಾಗರಿಕ ರೀತಿ ನೀತಿ ನಡೆವಳಿಕೆಗಳನ್ನು ಅರಿತಿದ್ದ ಮಂಜರಿ ರಾಜಭವನದಲ್ಲಿದ್ದ ಎಲ್ಲರನ್ನೂ ಆದರಭಾವದಿಂದ ನೋಡುತ್ತ ಗೌರವ ಪಾತ್ರಳಾದಳು. ರಾಜಕುಮಾರ ಶಕ್ತಿಪಾಲನೂ ಮಂಜರಿಯ ಮೇಲೆ ತುಂಬಾ ಹಚ್ಚಿಕೊಂಡನು. ಅವಳೂ ಅವನನ್ನು ಸ್ವಂತ ಮಗನ ಹಾಗೆ ನೋಡುತ್ತಿದ್ದಳು. ಹೀಗೆ ಮಂಜರಿಯ ಸ್ಥಾಯಿ ಹೆಚ್ಚಾದುದರಿಂದ ರೂಪಮತಿಯ ಹೃದಯವು ಅಸೂಯೆಯಿಂದ ದಹಿಸತೊಡಗಿತು.

ಒಂದು ದಿನ ಅವಳು ಬೆಳಿಗ್ಗೆ ನಿದ್ದೆಯಿಂದೆದ್ದ ಕೂಡಲೇ ತನ್ನ ಮುತ್ತಿನ ಹಾರವು ಕಾಣುವುದಿಲ್ಲವೆಂದು ಗಲಾಟೆ ಎಬ್ಬಿಸಿದಳು. ಆ ತಪ್ಪನ್ನು ಹೇಗಾದರೂ ಮಂಜರಿಯ ಮೇಲೆ ಹಾಕಬೇಕೆಂಬುದು ಅವಳ ಉದ್ದೇಶವಾಗಿತ್ತು.

ಮಹಾರಾಣಿಯ ಹಾರವು ಕಾಣದೆಹೋಯಿತೆಂದಾದ ಕೂಡಲೇ ಕಾವಲುಗಾರರೆಲ್ಲ ಗಾಬರಿಬಿದ್ದರು. ಆಗ ಮಂಜರಿ, "ನಾನು ಕಳ್ಳನನ್ನು ಹಿಡಿದುಕೊಡುತ್ತೇನೆ. ಅರಣ್ಯರಾಜ್ಯದಿಂದ ಬಂದಿರುವ ನನಗೆ ವಿಶೇಷ ಮಂತ್ರಶಕ್ತಿಗಳಿವೆ. ಕಳ್ಳನನ್ನು ಹಿಡಿಯುವ ಮೊದಲು ಈ ದಿನವೇ ನನ್ನ ಮಂತ್ರಶಕ್ತಿಯನ್ನು ಪ್ರದರ್ಶಿಸುತ್ತೇನೆ. ಎಲ್ಲರೂ ರಾಜಭವನದ ಚಾವಡಿಗೆ ಬರಲಿ" ಎಂದಳು.

ಆ ದಿನ ಮಧ್ಯಾಹ್ನ ಅವಳು ತನ ಗಂಡನೊಂದಿಗೆ ತನ್ನ ಯೋಜನೆಯೊಂದನ್ನು ಹೇಳಿದಳು. ಅದರಂತೆ ಅಪರಾಹ್ನವಾಗುವಷ್ಟರಲ್ಲಿ ಚಾವಡಿಯು ವಠಾರದಲ್ಲಿ ಜನಸಂದಣಿ ತುಂಬಿಹೋಯಿತು. ಕಣ್ಣುಗಳಿಗೆ ಬಟ್ಟೆ ಕಟ್ಟಿಕೊಂಡು ಮಂಜರಿ ಅಲ್ಲಿಗೆ ಬಂದಳು. ರಾಜನ ಮುಂದೆ ಒಂದು ಮೇಜಿನ ಮೇಲೆ ಸಣ್ಣವೂ ದೊಡ್ಡವೂ ಆದ ಅನೇಕ ವಸ್ತುಗಳಿದ್ದುವು. ಮಂಜರಿಯು ಅಭಿಮತದಂತೆ ರಾಜಕುಟುಂಬಕ್ಕೆ ಸೇರಿದ ಒಬ್ಬೊಬ್ಬರೇ ಬಂದು, ಒಂದೊಂದು ವಸ್ತುವನ್ನು

ಮುಟ್ಟಿದರು. ಒಂದು ವಸ್ತುವನ್ನು ಯಾರಾದರೂ ಮುಟ್ಟಿದಾಗ ರಾಜನು, "ಮಂಜರೀ, ಈಗ ಮುಟ್ಟಿದ ವಸ್ತುಯಾವುದು ? ಕೋಳಿಮೊಟ್ಟೆಯೋ, ಕೊಡೆಯೋ, ಲೋಟೆಯೋ ?" ಎಂದು ಕೇಳಿದನು.

"ಲೋಟೆ" ಎಂದಳು ಮಂಜರಿ. ಅದು ನಿಜವೇ. ಮತ್ತೊಮ್ಮೆ ಯಾರೋ ಒಂದನ್ನು ಮುಟ್ಟಿದಾಗ ರಾಜನು "ಮಂಜರೀ, ಈಗ ಮುಟ್ಟಿದ ವಸ್ತು ಯಾವುದು ? ಬೀಸಣಿಗೆಯೋ, ಸಂಚಿಯೋ, ಲೋಟೆಯೋ, ಕೋಳಿಮೊಟ್ಟೆಯೋ, ಮಸಿದೌತಿಯೋ, ಮಯಣದ ಬತ್ತಿಯೋ ? ಗರಿಯೋ...?" ಎಂದು ಕೇಳಿದನು. "ಮಯಣದ ಬತ್ತಿ" ಎಂದಳು ಮಂಜರಿ. ಅದೂ ನಿಜವೇ.

ಈ ವಿಧವಾಗಿ ಮಂಜರಿ ಪ್ರತಿಸಾರಿಯೂ ನಿಜವನ್ನೇ ಹೇಳಿದಳು. "ನಾಳೆ ಸಾಯಂಕಾಲದೊಳಗೆ ಮುತ್ತಿನ ಹಾರವು ಸಿಗದೇಹೋದರೆ ಕದ್ದವರನ್ನು ಹಿಡಿದು ತೋರಿಸುತ್ತೇನೆ. ಇದಕ್ಕಿಂತ ಹೆಚ್ಚಿನ ಮಂತ್ರಶಕ್ತಿ ನನ್ನ ಬಳಿಯಲ್ಲಿದೆ" ಎಂದಳು ಮಂಜರಿ.

ಎಲ್ಲರೂ ಮಂಜರಿಯ ಮಂತ್ರಶಕ್ತಿಯನ್ನು ಹೊಗಳುತ್ತಾ ಹೊರಟುಹೋದರು. ಆ ದಿನ ಕತ್ತಲಾಗುವ ಹೊತ್ತಿನಲ್ಲಿ ರೂಪವತಿ ರಹಸ್ಯವಾಗಿ ಮಂಜರಿಯ ಬಳಿಗೆ ಹೋಗಿ, "ನಾನೊಂದು ವಿಷಯ ಹೇಳುತ್ತೇನೆ. ನಮ್ಮ ಗಂಡನ ಮೇಲೆ ಪ್ರಮಾಣ ಮಾಡಿ ರಹಸ್ಯವನ್ನು ಬಹಿರಂಗಪಡಿಸುವುದಿಲ್ಲವೆಂದು ನನಗೆ ಮಾತು ಕೊಡಬೇಕು" ಎಂದಳು. ಮಂಜರಿ ಹಾಗೆಯೇ ಪ್ರಮಾಣ ಮಾಡಿದಳು.

"ನನ್ನನ್ನು ನೀನು ಕ್ಷಮಿಸಬೇಕು ತಂಗಿ. ನಾನೇ ಮುತ್ತಿನ ಹಾರದ ಕಳ್ಳಿ. ಅಸೂಯೆಯಿಂದ ನಿನ್ನ ಮೇಲೆ ಕಳ್ಳತನದ ಆರೋಪ ಹಾಕಬೇಕೆಂದು ನೋಡಿದೆ. ನಿನ್ನಂತಹ ದೊಡ್ಡ ಗುಣದವಳ ಮೇಲೆ ಅಸೂಯೆಪಟ್ಟಿದ್ದು ನನ್ನ ಅವಿವೇಕವಾಯಿತು" ಎಂದಳು ರೂಪವತಿ. ಇಬ್ಬರೂ ಪರಸ್ಪರ ಆಲಿಂಗಿಸಿಕೊಂಡು ಆನಂದಬಾಷ್ಪ ಸುರಿಸಿದರು. ಮುತ್ತಿನ ಹಾರ ದೊರಕಿತೆಂದು ಎಲ್ಲರಿಗೂ ಗೊತ್ತಾಯಿತಾದರೂ ಕಳ್ಳತನದ ಸುದ್ದಿ ಅಡಗಿಹೋಯಿತು.

ಮಂಜರಿ ಮಾಡಿದ ಇಂದ್ರಜಾಲಕ್ಕೆ ಆಧಾರವೇನೆಂದರೆ, ಯಾರಾದರೂ ಮೇಜಿಯ ಮೇಲಿದ್ದ ಒಂದು ವಸ್ತುವನ್ನು ಮುಟ್ಟಿದಾಗ, ರಾಜನು ಬೇರೆ ಬೇರೆ ವಸ್ತುಗಳನ್ನು ಹೇಳುತ್ತ ಮುಟ್ಟಲ್ಪಟ್ಟ ವಸ್ತುವಿನ ಹೆಸರು ಹೇಳುವುದಕ್ಕೆ ಮೊದಲು ಒಂದು ಕಪ್ಪು ವಸ್ತುವಿನ ಹೆಸರು ಹೇಳಬೇಕೆಂದು ಮೊದಲೇ ಏರ್ಪಾಡು ನಡೆದಿತ್ತು. ಆ ಪ್ರಕಾರ ರಾಜನು ಲೋಟೆಗೆ ಮೊದಲು ಕೊಡೆಯ ಹೆಸರನ್ನೂ, ಮಯಣದ ಬತ್ತಿಗೆ ಮೊದಲು ಮಸಿದೌತಿಯ ಹೆಸರನ್ನೂ ಹೇಳಿದನು. ಅದುವೇ ಮಂತ್ರದ ಗುಟ್ಟು.





# ಉಡುಗೊರೆ

ನೆಲ್ಲೂರು ವೆಂಕಟಾಚಲಯ್ಯಾಂತ ಒಬ್ಬನಿದ್ದ. ಅವನದೊಂದು ಪ್ರತ್ಯೇಕ ಗುಣ. ತನಗಾಗಿ ಎಷ್ಟು ಬೇಕಾದರೂ ಖರ್ಚು ಮಾಡುವನು. ಇನ್ನೊಬ್ಬರಿಗಾಗಿ ಖರ್ಚು ಮಾಡಬೇಕೆಂದರೆ ಅವನ ಪ್ರಾಣವು ವಿಲಿ ವಿಲಿ ಒದರಾಡುತ್ತಿತ್ತು. ಮುಖ್ಯವಾಗಿ ಯಾರ ಮನೆಯಿಂದಲೋ ಏನೋ ಒಂದು ಶುಭಕಾರ್ಯಕ್ಕೆ ಆಮಂತ್ರಣ ಬಂದಾಗ, ಅವರು ಎಷ್ಟೇ ಹತ್ತಿರದವರಾದರೂ ಏನಾದರೂ ಉಡುಗೊರೆ ಕೊಡಬೇಕಾಗಿ ಬರುವುದರಿಂದ, ಅವನು ಅಲ್ಲಿಗೆ ಹೋಗುವುದನ್ನೇ ತಪ್ಪಿಸಿ, ತನ್ನ ಹೆಂಡತಿ ಮಕ್ಕಳನ್ನು ಮಾತ್ರ ಕಳುಹಿಸಿ ಬಿಡುತ್ತಿದ್ದನು.

ಅವನ ಹೆಂಡತಿ ಕೂಡಾ ಅವನಿಗೆ ತಕ್ಕವಳೇ ಕೂಡಿ ಬಂದುದು ಅವನ ಪುಣ್ಯ. "ವೆಂಕಟಾಚಲಯ್ಯ ಬರಲಿಲ್ಲವೇಕೆ ?" ಎಂದು ಯಾರಾದರೂ ಕೇಳಿದರೆ, "ಉಡುಗೊರೆ ವಸ್ತು ಕೊಂಡುಕೊಂಡು ಬರುತ್ತೇನೆ ಅಂತ ಹೋದರು. ಈಗ ಬರುತ್ತಾರೆ" ಎಂದು ಹೇಳುವಳು ಹೆಂಡತಿ.

ಅಲ್ಲಿಯ ಕೆಲಸ ಕಾರ್ಯಗಳು ಮುಗಿಯುವಾಗ ಅವನ ಹೆಂಡತಿ "ಇವರಿಗೆ ಯಾವಾಗಲೂ ಹೀಗೆಯೇ! ಏನು ಮತಿಮರೆವೋ, ತಾತ್ಸಾರವೋ!" ಎಂದು ಬೇಸತ್ತುಕೊಂಡವಳ ಹಾಗೆ ನಟಿಸುತ್ತ ಮಕ್ಕಳೊಂದಿಗೆ ಊಟ ಮಾಡಿ, ಗಂಡನಿಗಾಗಿ ಭಕ್ಷ್ಯಗಳನ್ನು ಕಟ್ಟಿಕೊಂಡು ಮನೆಗೆ ಹಿಂದಿರುಗುತ್ತಿದ್ದಳು. ಹೆಂಡತಿ ತಂದುಕೊಟ್ಟ ಸವಿಭಕ್ಷ್ಯಗಳನ್ನು ಸಂತೋಷದಿಂದ ತಿನ್ನುವನು ವೆಂಕಟಾಚಲಯ್ಯ.

ಅನೇಕ ಕಡೆಗಳಲ್ಲಿ ಹೀಗೆಯೇ ಆದುದರಿಂದ, ಆ ಗಂಡ ಹೆಂಡಿರದು ಕೇವಲ ಕಣ್ಣು ಕಟ್ಟು ನಟನೆಯೇ ಎಂದು ಎಲ್ಲರಿಗೂ ಗೊತ್ತಾಗಿತ್ತು. ಪ್ರತ್ಯಕ್ಷವಾಗಿ ಕೆಲವರೂ, ಪರೋಕ್ಷವಾಗಿ ಹಲವರೂ ಅವರಿಗೆ ತಮಾಷೆ ಮಾಡುತ್ತಿದ್ದರು.

ಹೀಗಿರುವಾಗ ವೆಂಕಟಾಚಲಯ್ಯನ ಆಪ್ತಮಿತ್ರನ ಮಗಳಿಗೆ ಮದುವೆ ನಿಶ್ಚಯವಾಯಿತು. ಈಸಾರಿ ತಪ್ಪಿಸಿಕೊಳ್ಳಲು ವೆಂಕಟಾಚಲಯ್ಯನಿಗೆ ಸಾಧ್ಯವಿರಲಿಲ್ಲ. ಹೆಂಡತಿ ಮಕ್ಕಳನ್ನು ಮಾತ್ರ ಕಳುಹಿಸಿ ಸುಮ್ಮನಿರಲಿಕ್ಕೆ ಇದು ಬಂಧುಗಳಲ್ಲಿ ನಡೆಯುವ ಮದುವೆಯಾಗಿರಲಿಲ್ಲವಷ್ಟೆ ?

"ಆ ಸ್ನೇಹಿತ ಎರಡು ದಿನ ಮುಂದಾಗಿ ಬಂದು ಮದುವೇ ಕೆಲಸಗಳಲ್ಲಿ ಸಹಾಯ ಮಾಡಬೇಕು

ಎಂ. ಕೆ. ಈಶ್ವರರಾವ್

ಅಂದಿದ್ದಾನೆ. ಮದುವೆಯ ದಿನವಂತೂ ಹೋಗಲೇ ಬೇಕು. ಉಡುಗೊರೆ ಏನಾದರೂ ಕೊಡಬೇಕಲ್ಲ? ಹೇಗಪ್ಪ?" ಎಂದು ವೆಂಕಟಾಚಲಯ್ಯ ತನ ಹೆಂಡತಿಯ ಮುಂದೆ ಅಂದನು.

"ಅದಕ್ಕೇಕೆ ತಲೇ ಮಂಡೆ ಒಡಕೊಳ್ಳುವಿರಿ? ಖಾಲೀಪೆಟ್ಟಿಗೆ ಒಳಗೆ ಏನಾದರೂ ಎಲೆಯೋ ಕಾಗದವೋ ಸುತ್ತಿಸುತ್ತಿ ಇಟ್ಟು, ಪೆಟ್ಟಿಗೆಗೆ ಚಂದಾದ ಬಣ್ಣದ ಕಾಗದ ಹಚ್ಚಿ ಕೊಟ್ಟುಬಿಡಿರಿ. ಮದುವೇ ಗದ್ದಲದಲ್ಲಿ ಯಾರು ಏನು ಕೊಟ್ಟರೆಂದು ಯಾರಿಗೂ ಗೊತ್ತಾಗೋದಿಲ್ಲ. ಗೊತ್ತಾದಾಗ ಯಾರು ಕೊಟ್ಟರೋ ಏನೋ ಅಂತ ಆಗುತ್ತೆ! ಆಗದೆ?" ಎಂದಳು ವೆಂಕಟಾಚಲಯ್ಯನ ಹೆಂಡತಿ.

ಹೆಂಡತಿಯ ಆಲೋಚನೆ ವೆಂಕಟಾಚಲಯ್ಯನಿಗೆ ಹಿಡಿಸಿತು. ಅವಳ ಬುದ್ಧಿಯನ್ನು ಹೊಗಳುತ್ತ, ಮದುವೆಯ ದಿನ ತನ್ನ ಉಡುಗೊರೆಯನ್ನು ಸಿದ್ಧ ಪಡಿಸತೊಡಗಿದನು. ಒಂದು ರಟ್ಟಿನ ಪೆಟ್ಟಿಗೆಯೊಳಗೆ ತುಂಬ, ಯಾವ್ಯಾವುದೋ ಎಲೆ ಸೊಪ್ಪುಕಾಗದ ಮುಂತಾದುವನ್ನು ಒತ್ತೊತ್ತಾಗಿ ತುಂಬಿಸಿ, ಅವುಗಳ ನಡುವೆ ಒಂದು ಮಲ್ಲಿಗೆ ಹೂವನಿಟ್ಟು ಮುಚ್ಚಿ, ಪೆಟ್ಟಿಗೆಗೆ ರಂಗುರಂಗಿನ ಕಾಗದಗಳನ್ನು ಸುಂದರ ವಾಗಿ ಕಾಣುವಂತೆ ಸುತ್ತಿ, ಬಹಳ ಭವ್ಯವಾದ ಉಡುಗೊರೆ ಕೊಡುವವನ ಹಾಗೆ ಮಿತ್ರನ ಮದುವೆಗೆ ಹೋದನು.

ಆದರೆ ವೆಂಕಟಾಚಲಯ್ಯನ ಹೆಂಡತಿಯ ಲೆಕ್ಕದಂತೆ ನಡೆಯಲಿಲ್ಲ. ಯಾವಾಗಲೂ ಯಾವ ಮದುವೆಗಳಿಗೂ ಹೋಗದ ವೆಂಕಟಾಚಲಯ್ಯನ ಮೇಲೆ, ಅವನ ಕೈಯಲ್ಲಿದ್ದ ಪೆಟ್ಟಿಗೆಯ ಮೇಲೆ ಎಲ್ಲರ ಕಣ್ಣು ಕುಳಿತಿತ್ತು. ವೆಂಕಟಾಚಲಯ್ಯ ಮದುವೆಗೆ ಉಡುಗೊರೆ ಕೊಡುವನೆಂದರೆ ಅದೊಂದು ಅದ್ಭುತ!

ಉಡುಗೊರೆನೀಡುವ ಸರಿಸೆ ಬಂದಾಗ ವೆಂಕಟಾಚಲಯ್ಯನೂ ತನ್ನ ಉಡುಗೊರೆ ಕೈಜಾರಿಸಿಕೊಂಡು ಉಸಿರುಬಿಟ್ಟ, ದೊಡ್ಡ ಭಾರ ಕಳೆದುಕೊಂಡ ಹಾಗೆ. ಆಮೇಲೆ ಊಟದ ಸಾಲು ಹಿಡಿದು ಸಂತೋಷವಾಗಿ ಕುಳಿತ. ಎಲೆಯಲ್ಲಿ ಬಡಿಸಿದ ಪದಾರ್ಥಗಳೆಲ್ಲ



ಎಷ್ಟೋ ರುಚಿಯಾಗಿರುವಂತೆ ಅವನಿಗೆ ತೋರಿತು. ಊಟದ ವೇಳೆಯಲ್ಲಿ ಲಡ್ಡು ಪುಡಿ ಮಾಡುತ್ತಿದ್ದ ವೆಂಕಟಾಚಲಯ್ಯನನ್ನು ನೋಡಿ, ಆ ಮನೆಯವರ ಕಡೆಯ ಸ್ನೇಹಿತನೊಬ್ಬ ನೀರು ಕೇಳುತ್ತಾ, "ಓಹ್! ನಮ್ಮ ವೆಂಕಟಾಚಲಯ್ಯ! ಇವರಿಗೆ ಇನ್ನೊಂದು ಲಡ್ಡು ಹಾಕಿ! ಆವರು ಇಷ್ಟು ಒಳ್ಳೆಯ ಉಡುಗೊರೆ ಕೊಡುತ್ತಾರೆಂದು ಗೊತ್ತಿರುತ್ತಿದ್ದರೆ ನನ್ನ ಮಗಳ ಮದುವೆ ಯಾವಾಗಲೋ ಮಾಡಿಬಿಡ್ತಿದ್ದೆ!" ಎಂದನು ಹಾಸ್ಯಚಟಾಕಿಯಾಗಿ.

ಆ ಮಾತು ವೆಂಕಟಾಚಲಯ್ಯನ ಮೇಲೆ ತಣ್ಣೀರು ಸುರಿದ ಹಾಗಾಯಿತು. ಇವನು ತಾನು ಕೊಟ್ಟ ಪೆಟ್ಟಿಗೆಯನ್ನು ತೆರೆದು ನೋಡಿಬಿಟ್ಟನೇನು? ತಲೆ ಯೆತ್ತಲು ಸಾಧ್ಯವಿಲ್ಲದಂತಾಯಿತು. ಈ ಆಲೋಚನೆ ಹೇಳಿದ ಹೆಂಡತಿಯ ಕುತ್ತಿಗೆ ಹಿಚುಕಬೇಕೆನಿಸಿತು.

"ವೆಂಕಟಾಚಲಯ್ಯ ಅಂತಹುದೇನು ಉಡುಗೊರೆ ಕೊಟ್ಟರು?" ಎಂದು ಒಬ್ಬಿಬ್ಬರು ಕುತೂಹಲದಿಂದ ಕೇಳಿದರು.

"ತಂದು ತೋರಿಸುತ್ತೇನೆ ನೋಡಿ!" ಎಂದು ಹೇಳಿ ಆ ಸ್ನೇಹಿತನು ಹೋಗಿ ವೆಂಕಟಾಚಲಯ್ಯ ಕೊಟ್ಟ ಪೆಟ್ಟಿಗೆಯನ್ನೇ ತಂದನು.

ಈಗ ವೆಂಕಟಾಚಲಯ್ಯನ ಮುಖದಲ್ಲಿ ನೆತ್ತರೇ ಇಲ್ಲದಂತಾಯಿತು. ಎಲ್ಲರ ಇದಿರಿನಲ್ಲಿ ತನ್ನ ಮಾನ ಮೂರು ಕಾಸಿಗಿಂತ ಕೀಳಾಗುತ್ತದೆ. ಎಲ್ಲರೂ ತನ್ನ ಮೇಲೆ ಛೀ ಮಾರಿ ಮಾಡುತ್ತಾರೆ. ಹೀಗೆ ಹಲವರ ಇದಿರಿನಲ್ಲಿ ಆಗುವುದಕ್ಕೆ ಬದಲಾಗಿ ಮದುವೆಗೇ ಬಾರದೆ ಜ್ವರ ಬಂತೆಂದು ಮನೆಯಲ್ಲಿ ಮಲಗಿ ಬಿಡಬಹುದಿತ್ತು! ಅಯ್ಯೊ! ಈಗೇನು ಗತಿ?

ಹೀಗೆ ವೆಂಕಟಾಚಲಯ್ಯ ಮನಸ್ಸಿನಲ್ಲಿ ರೋದಿಸುತ್ತಿರಲು, ಲಡ್ಡು ದುರ್ನಾತ ಬಡೆಯುತ್ತಿರಲು, ಆ ಸ್ನೇಹಿತ, "ನೋಡಿರಿ! ನಮ್ಮ ವೆಂಕಟಾಚಲಯ್ಯ ಮದುಮಗಳಿಗೆ ಎಂಥ ಬೆಲೆ ಬಾಳುವ ವಜ್ರದುಂಗುರ ಉಡುಗೊರೆ ಮಾಡಿದರೋ!" ಎನ್ನುತ್ತ ಆ ಸ್ನೇಹಿತ ಗಾರುಡೀ ಮಾಡುವವನ ಹಾಗೆ ಆ ಪೆಟ್ಟಿಗೆಯೊಳಗಿನಿಂದ ಉಂಗುರವೊಂದನ್ನು ಎತ್ತಿ ಎಲ್ಲರಿಗೂ ತೋರಿಸಿದನು.

ವೆಂಕಟಾಚಲಯ್ಯ ತನ್ನ ಹೊಟ್ಟೆಯೊಳಗಿನಿಂದ ಒದ್ದಾಡಿಕೊಂಡು ಬರಲಿದ್ದ ಆರ್ತನಾದವನ್ನು ಬಲವಂತವಾಗಿ ತಡೆದುಕೊಂಡನು. ಅದು ತನ್ನ ಬೆರಳಲ್ಲಿದ್ದ ಉಂಗುರವೇ! ಪೆಟ್ಟಿಗೆಯೊಳಗೆ ಚೂರು ಪಾರುಗಳನ್ನು ತುರುಕಿಡುವಾಗ, ಅದು ಪೆಟ್ಟಿಗೆಯೊಳಗೆ ಜಾರಿ ಬಿದ್ದಿದೆ! ತನಗೆ ಗೊತ್ತಾಗಲೇ ಇಲ್ಲ.

ಆದರೆ ಆ ನಷ್ಟ ತನಗಾಗಲಿದ್ದ ಘೋರಾಪಮಾನದ ಮುಂದೆ ತೀರ ಅಲ್ಪವೆನಿಸಿತು. ಸಂತೋಷದಿಂದ ಆಕಾಶದಲ್ಲಿ ತೇಲಿದನು.





# ದೇವೀಭಾಗವತ

ಈ ರೀತಿಯಾಗಿ ಪುರಾಣ ಹೇಳುತ್ತಿರುವ ಸೂತ ಪುರಾಣಿಕನನ್ನು, ಶೌನಕಾದಿಮುನಿಗಳು ನಡುವೆ ತಡೆದು ಹೀಗೆಂದರು: "ಬ್ರಹ್ಮ, ವಿಷ್ಣು, ಮಹೇಶ್ವರರೆಂಬ ತ್ರಿಮೂರ್ತಿಗಳು ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಕರಾದವರೆಂದು, ಆ ಮೂವರಲ್ಲಿ ವಿಷ್ಣುವೇ ಉತ್ತಮನೆಂದು ಕೇಳಿದ್ದೇವೆ. ಅಂತಹ ಮಹಾವಿಷ್ಣುವನ್ನು ಯೋಗನಿದ್ರೆ ವಶಪಡಿಸಿಕೊಳ್ಳುವಾಗ, ವಿಷ್ಣುವಿನ ಮಹಾಶಕ್ತಿಗಳೆಲ್ಲ ಏನಾದುವು? ಇಷ್ಟಕ್ಕೂ ಆದಿ ಶಕ್ತಿಗೆ ವಿಷ್ಣುವನ್ನೂ ಮೀರಿಸುವಂತಹ ಶಕ್ತಿ ಹೇಗೆ ಬಂದಿತು? ನಾರದನೇ ಮೊದಲಾದ ದೇವತೆಗಳ ನಿಕಟವರ್ತಿಗಳಾದವರು ವಿಷ್ಣುವೇ ಕಾರಣಗಳಿಗೆಲ್ಲಾ ಕಾರಣನೆಂದು ಹೇಳುತ್ತಾರಲ್ಲಾ? ನೀವೇನೋ ಶಕ್ತಿಯೇ ಎಲ್ಲದಕ್ಕೂ ಕಾರಣವೆನ್ನುವಿರಿ? ನಿಜವು ಏನೆಂಬುದು ನಮಗೆ ಗೊತ್ತಾಗುವಂತೆ ಹೇಳಬೇಕು"

## ಶಕ್ತಿಯ ಸ್ವರೂಪ

ಮುನಿಗಳ ಮಾತಿಗೆ ಸೂತನು ಹೀಗೆಂದು ಹೇಳಿದನು: ಮುನಿಗಳೇ ನಿಮ್ಮ ನ್ಯಾಯವಾದ ಕುತೂಹಲಗಳಿಗೆ ಸಂತೋಷವಾಗಿದೆ. ನೀವು ಕೇಳಿದುದಕ್ಕೆ ಸಮಾಧಾನಗಳನ್ನು ಹೇಳುತ್ತೇನೆ, ಶ್ರದ್ಧೆಯಿಂದ ಕೇಳಿರಿ. ನಾರದನೇ ಮೊದಲಾದವರು ಅನಂತವಾಗಿರುವ ಶಕ್ತಿಯ ಪ್ರಭಾವವನ್ನು ಅರ್ಥಮಾಡಿಕೊಳ್ಳಲಾಗದೆ, ತಮಗೆ ಅರ್ಥವಾದ ವಿಷ್ಣುವನ್ನೇ ಸರ್ವಶಕ್ತಿವಂತನೆಂದು ಭ್ರಮೆ ಪಟ್ಟಿದ್ದಾರೆ. ಹಾಗೆಯೇ ಕೆಲವರು ಶಿವನೇ ಪರದೈವವೆಂದೂ, ಮತ್ತೆ ಕೆಲವರು ಸೂರ್ಯನೆಂದೂ, ಇನ್ನು ಕೆಲವರು ಅಗ್ನಿಯೆಂದೂ, ಬೇರೆ ಕೆಲವರು ಚಂದ್ರನೆಂದೂ, ಇಂದ್ರನೆಂದೂ, ಉಳಿದವರು ಇನ್ನೂ ಯಾವ ಯಾವುದೋ ಎಂದೂ, ಮಾಯೆಯಲ್ಲಿ ಬಿದ್ದು ಬಗೆಬಗೆಯಾಗಿ ಅಭಿಪ್ರಾಯ ಪಡುತ್ತಾರೆ. ಅವರವರ ಶಕ್ತಿಗೆ ತಕ್ಕ ಹಾಗೆ ಈ ಅಭಿಪ್ರಾಯಗಳಿಂದ ತಪ್ಪಿಲ್ಲವೆನಿಸಿದರೂ, ಎಲ್ಲಾ ಪ್ರಮಾಣಗಳಿಗೂ ಅತೀತವಾದ ಆ ಪರಶಕ್ತಿಯೊಂದೇ ನಿಜವಾದ ಶಕ್ತಿ. ಅದು ವಿಷ್ಣುವಿನಲ್ಲಿಯೂ, ಶಿವನಲ್ಲಿಯೂ, ಸೂರ್ಯನಲ್ಲಿಯೂ, ವಾಯುವಿನಲ್ಲಿಯೂ ಅಗ್ನಿಯಲ್ಲಿಯೂ ಸೇರಿ

೨. ಮಧುಕೈಟಭರ ವಧೆ



ಕೊಂಡಿದೆ. ಅಂತಹ ಶಕ್ತಿಯಿಂದ ಎಚ್ಚರಿಸಲ್ಪಟ್ಟ ವಿಷ್ಣು, ತನ್ನ ಬಳಿ ನಿಂತಿದ್ದ ಬ್ರಹ್ಮನನ್ನು ನೋಡಿ, "ಏನಿದು ಬ್ರಹ್ಮಾ, ನೀನು ತಪಸ್ಸು ಮಾಡುವುದನ್ನು ಬಿಟ್ಟು ಹೀಗೆ ಬಂದ ಕಾರಣವೇನು ?" ಎಂದು ಕೇಳಿದನು.

"ದೇವದೇವಾ ! ನನಗೆ ಇನ್ನೆಲ್ಲಿಯ ತಪಸ್ಸು ? ನಿನ್ನ ಕಿವಿಗಳಿಂದ ಉದ್ಭವಿಸಿದ ಮಧುಕೈಟಭರೆಂಬ ಇಬ್ಬರು ರಾಕ್ಷಸರು ನನ್ನನ್ನು ಕೊಲ್ಲುವೆವೆನ್ನುತ್ತ, ಯುದ್ಧಕ್ಕೆ ಕರೆಯುತ್ತಿದ್ದಾರೆ" ಎಂದನು ಬ್ರಹ್ಮ.

"ಇಷ್ಟೊಂದು ಸಣ್ಣ ವಿಷಯಕ್ಕೆ ಹೆದರುವೆಯಾ ? ನಾನು ಎಷ್ಟುಮಂದಿ ರಾಕ್ಷಸರನ್ನು ಕೊಂದಿದ್ದೇನೆ ! ಇದೇನು ಮಹಾ ?" ಎಂದು ವಿಷ್ಣು ಹೇಳುವಷ್ಟರಲ್ಲಿ ಆ ರಾಕ್ಷಸರು ಅಲ್ಲಿಗೇ ರಭಸದಿಂದ ಬಂದು ಬಿದ್ದು, ಬ್ರಹ್ಮನನ್ನು ನೋಡಿ, "ಇಲ್ಲಿಗೆ ಓಡಿ ಬಂದು ಅಡಗಿರುವೆಯಾ ? ನಾವು ಕಂಡುಹಿಡಿಯದಿರುವೆವೇ ? ಏನು ಕತೆ ? ಇವನು ನಿನ್ನನ್ನು ರಕ್ಷಿಸುವನಂತೇನು ? ಸಾಯಲಿರುವ ನೀನು ಒಬ್ಬನೇ ಸಾಯುವ ಬದಲಿಗೆ ಇವನನ್ನೂ ಜತೆಯಲ್ಲಿ ಸಾಯಿಸುವಿಯೇನು ? ವೀರನಾದರೆ ಬಾ ಮುಂದೆ. ನಮ್ಮೊಂದಿಗೆ ಯುದ್ಧಮಾಡು. ಇಲ್ಲದಿದ್ದರೆ ನಮ್ಮ ದಾಸನಾದೆನೆಂದು ಒಪ್ಪಿಕೋ" ಎಂದು ಮೇಲೆ ಮೇಲೆ ಬೀಳಲು ಬಂದರು.

ವಿಷ್ಣು ಬ್ರಹ್ಮನನ್ನು ತನ್ನ ಹಿಂಗೆ ನಿಲ್ಲುವಂತೆ ಹೇಳಿ, ರಾಕ್ಷಸರೊಂದಿಗೆ, "ಬಾಯಿಗೆ ಬಂದ ಹಾಗೆ ಬೊಗಳುವಿರೇನಿದು ? ಮದ ತಲೆಗೇರಿದೆಯೋ ? ಅವಸರಪಡಬೇಡಿ. ನಿಮ್ಮ ತೀಟೆ ಚೆನ್ನಾಗಿ ತೀರಿಸಿಬಿಡುತ್ತೇನೆ" ಎಂದವನೇ ಯುದ್ಧಕ್ಕೆ ಎದ್ದನು.

ಮಹಾದೇವಿ ಆಕಾಶದಲ್ಲಿ ನೋಡುತ್ತಿರಲು, ವಿಷ್ಣು ಮಧುವಿನೊಂದಿಗೆ ಯುದ್ಧಕ್ಕೆ ತೊಡಗಿದನು. ಅವರ ಯುದ್ಧಹತಿಗಳಿಂದ ಸುಳಿಗಾಳಿಯೆದ್ದು ಸಮುದ್ರವು ಉಕ್ಕಿಹೊರಳಾಡತೊಡಗಿತು. ಮಧು ದಣಿದು ಉಸಿರುಬಿಡುವುದನ್ನು ನೋಡಿ ಕೈಟಭನು ವಿಷ್ಣುವಿನೊಂದಿಗೆ ಮಲ್ಲಯುದ್ಧಕ್ಕೆ ಬಂದನು. ಸ್ವಲ್ಪಹೊತ್ತಿನಲ್ಲಿ ರಾಕ್ಷಸರಿಬ್ಬರೂ ವಿಷ್ಣುವಿನೊಂದಿಗೆ ಕಲೆಬಿದ್ದು ಹೋರಾಡುತ್ತಿರಲು, ಕ್ರಮವಾಗಿ- ವಿಷ್ಣುವಿಗೆ ಆಯಾಸವಾಗತೊಡಗಿತು. ಮುಂದೇನು ಮಾಡುವುದೆಂದು ವಿಷ್ಣುವಿಗೆ ಗೊತ್ತಾಗಲಿಲ್ಲ. ಈ ರಾಕ್ಷಸರನ್ನು ಹೇಗೆ ಕೊಲ್ಲಲಿ ? ತನಗಿನ್ನು ಯಾರು ದಿಕ್ಕು ? ಹೀಗೆಂದು ವಿಷ್ಣು ಕಳವಳಿಸತೊಡಗಿದನು.

ವಿಷ್ಣುವಿನ ಮುಖದಲ್ಲಿ ಚಿಂತೆ ಸುಳಿದುದನ್ನು ನೋಡಿ ರಾಕ್ಷಸರು ಅವನೊಂದಿಗೆ, "ಸಾಕುಬಿಡು. ಯುದ್ಧಮಾಡಲು ನಿನ್ನಿಂದಾಗದೆ ಹೋದರೆ ದಾಸೋಹಂ ಅಂತ ಅಡ್ಡ ಬಿದ್ದುಬಿಡು. ಇಲ್ಲದಿದ್ದರೆ ನಿನ್ನನ್ನು ಕೊಂದು ಆಮೇಲೆ ಬ್ರಹ್ಮನನ್ನು ತೀರಿಸುತ್ತೇವೆ" ಎಂದರು.

ವಿಷ್ಣು ಸೌಮ್ಯಸ್ವರದಲ್ಲಿ ಅವರೊಂದಿಗೆ, "ಸ್ವಲ್ಪ ಆಯಾಸದಲ್ಲಿದ್ದೇನೆ ಅಷ್ಟೇ. ಆಯಾಸಗೊಂಡವ

ರನ್ನೂ, ಹಿಂದೆ ತಿರುಗಿದವರನ್ನೂ, ಹೆದರಿದವರನ್ನೂ, ಯುದ್ಧದಲ್ಲಿ ಬಿದ್ದುಬಿಟ್ಟವರನ್ನೂ ಇದಿರಿಸುವುದು ವೀರಧರ್ಮವಲ್ಲವಷ್ಟೆ ? ಅದು ಹಾಗಿರಲಿ, ನೀವಂತೂ ಇಬ್ಬರಿದ್ದೀರಿ. ನಾನೋ ಒಬ್ಬನೇ. ಒಂದು ನಿಮಿಷ ವಿಶ್ರಾಂತಿ ತೆಗೆದುಕೊಂಡು ಯುದ್ಧಮಾಡುತ್ತೇನೆ. ಸ್ವಲ್ಪ ಸಹನೆಯಿಂದಿರಿ. ನಿಮಗೆ ಮಾತ್ರ ಯುದ್ಧಧರ್ಮ ಗೊತ್ತಿಲ್ಲವೇನು ?" ಎಂದನು.

"ಸರಿ ಸರಿ ! ವಿಶ್ರಾಂತಿ ತಕ್ಕೋ ! ನಾವೂ ಸ್ವಲ್ಪ ವಿಶ್ರಮಿಸಿಬಿಡುತ್ತೇವೆ" ಎಂದರು ರಾಕ್ಷಸರು. ವಿಷ್ಣು ರಾಕ್ಷಸರ ಬಲವನ್ನು ಎಣಿಕೆ ಹಾಕುತ್ತ, ದಿವ್ಯದೃಷ್ಟಿಯಿಂದ ನೋಡಿ, ಇವರು ವರ ಬಲಪಡೆದವರೆಂಬುದನ್ನು ಅರಿತು, "ಸುಮ್ಮಸುಮ್ಮನೆ ಇವರ ಹತ್ತಿರ ಯುದ್ಧಮಾಡಿದೆನಲ್ಲ ! ಇವರು ಸ್ವೇಚ್ಛಾಮರಣವನ್ನು ವರವಾಗಿ ಪಡೆದವರು. ಇಂಥವರನ್ನು ಹೇಗೆ ಕೊಲ್ಲಲಿ ?" ಎಂದು ಆಂದೋಳನೆಗೊಳಗಾದನು. ಕಡೆಗೆ ವಿಷ್ಣು ಜಗದಂಬೆಯನ್ನು ಪ್ರಾರ್ಥಿಸತೊಡಗಿದನು. "ಅಮ್ಮಾ, ನಿನ್ನ ಸಹಾಯವಿಲ್ಲದೆ ಈ ರಾಕ್ಷಸರನ್ನು ಕೊಲ್ಲಲು ನನ್ನಿಂದ ಸಾಧ್ಯವಿಲ್ಲ. ಬಹುಶಃ ಇವರೇ ನನ್ನನ್ನು ಕೊಲ್ಲುವ ಹಾಗಿದೆ. ಇವರಿಗೆ ವರ ಕೊಟ್ಟವಳು ನೀನೇ ಅಲ್ಲವೇ ? ಇವರು ಸಾಯುವ ಉಪಾಯ ಕೂಡಾ ನೀನೇ ಹೇಳಬೇಕು."

ಹೀಗೆ ದೀನನಾಗಿ ಬೇಡುವ ವಿಷ್ಣುವನ್ನು ನೋಡಿ ದೇವಿ ಕಿರುನಗೆ ನಕ್ಕು, "ಯುದ್ಧಮಾಡುತ್ತಿರು. ನಾನು ಈ ರಾಕ್ಷಸರ ಮೇಲೆ ನನ್ನ ಮಾಯೆಯನ್ನು ಹರಡುತ್ತೇನೆ. ಆಗ ಅವರನ್ನು ಜಯಿಸಬಹುದು. ನಿನ್ನ ಬುದ್ಧಿ ಶಕ್ತಿಯೂ ಹರಿತವಾಗಿರಲಿ" ಎಂದಳು.

ರಾಕ್ಷಸರು ವಿಷ್ಣುವಿನೊಂದಿಗೆ, "ಎಷ್ಟು ಹೊತ್ತಯ್ಯಾ ವಿಶ್ರಾಂತಿ ? ಸೋತು ಹೋಗುವೆನೆಂದು ಏಕೆ ಹೆದರುವೆ ? ಶೂರರಿಗೆ ಜಯವೂ ಅಪಜಯವೂ ಸಹಜವೇ. ಎರಡನ್ನೂ ಸಮಾನವಾಗಿ ನೋಡಬೇಕು. ನೀನೇನೋ ಮಹಾಶೂರನೇ ! ಎಷ್ಟೋ ರಾಕ್ಷಸರನ್ನು ಕೊಂದವನಲ್ಲವೇ ? ಹಾಗಂತ ಯಾವಾಗಲೂ ಜಯವೇ ಸಿಗುವುದೇನು ?" ಎಂದು ತಿವಿನುಡಿಗಳನ್ನಾಡಿದನು.



## ಮಧುಕೈಟಭರ ಯುದ್ಧ

ರಾಕ್ಷಸರ ಮಾತುಗಳಿಂದ ವಿಷ್ಣು ಮಹಾಕೋಪದಿಂದ ಗರ್ಜಿಸಿ, ರಾಕ್ಷಸರ ಮೇಲೆ ಹಾರಿಬಿದ್ದನು. ಮುಷ್ಟಿಗಳಿಂದ ಸಿಡಿಲಿನಂತೆ ಗುದ್ದಿದನು. ರಕ್ತ ಒಸರುತ್ತಿರಲು ರಾಕ್ಷಸರು ಕೂಡಾ ವಿಷ್ಣುವಿನ ಎದೆಗೆ ಗುದ್ದಿದರು. ಹೀಗೆ ಬಹಳ ಕಾಲ ಮುಷ್ಟಿಯುದ್ಧ ಸಾಗಿತು. ವಿಷ್ಣುವಿನ ಶರೀರದಲ್ಲಿ ರಕ್ತ ಹರಿಯುತ್ತಿರಲು, ಆಯಾಸದಿಂದ ಆಕಾಶದಲ್ಲಿರುವ ದೇವಿಯನ್ನು ನೋಡಿದನು.

ಅದೇ ಸಮಯದಲ್ಲಿ ದೇವಿ ರಾಕ್ಷಸರ ಮೇಲೆ ಮನ್ಮಥ ಬಾಣಗಳಂತಹ ದೃಷ್ಟಿಯನ್ನು ಪಸರಿಸಿದಳು. ಅದರಿಂದ ಪರವಶರಾದ ರಾಕ್ಷಸರು ಯುದ್ಧದ ಮಾತು ಮರೆತು ಮೋಹಪಾಶಕ್ಕೆ ಸಿಕ್ಕಿಕೊಂಡರು.



ಗಿರುವುದು ನಿಜವಾದ ಪಕ್ಷದಲ್ಲಿ ನನ್ನ ಕೈಯಲ್ಲಿ ನಿಮ್ಮ ಜೀವ ಹೋಗಬೇಕು. ಧೈರ್ಯವಿದ್ದರೆ ಕೊಡಿರಿ ನಿಮ್ಮ ಜೀವ" ಎಂದನು ವಿಷ್ಣು.

ರಾಕ್ಷಸರು ಕಳವಳಪಟ್ಟು ತುಸು ಆಲೋಚಿಸಿ, "ಕೊಡುತ್ತೇವೆ. ನಾವು ಮಾತು ತಪ್ಪುವವರಲ್ಲ. ನೀನು ಕೂಡಾ ಮಾತು ತಪ್ಪದವನಾಗಿದ್ದರೆ ನಮಗೆ ಕೊಡುವುದಾಗಿ ಹೇಳಿದ ವರವನ್ನು ಈಗ ಕೊಡು. ನೀರಿಲ್ಲದ ವಿಶಾಲಪ್ರದೇಶದಲ್ಲಿ ನಮ್ಮನ್ನು ಕೊಲ್ಲು. ಹಾಗಾದರೇನೇ ನಾವು ನಿನ್ನ ಕೈಯಲ್ಲಿ ಸಾಯುತ್ತೇವೆ" ಎಂದರು.

ವಿಷ್ಣು ನಗುತ್ತ ತನ್ನ ತೊಡೆಗಳನ್ನು ತಟ್ಟಿ ಬೆಳೆಸುತ್ತ "ರಾಕ್ಷಸರೇ, ಬನ್ನಿ ನನ್ನ ತೊಡೆಯ ಮೇಲೆ" ಎಂದನು.

ರಾಕ್ಷಸರು ತಮ್ಮ ಶರೀರವನ್ನು ವಿಷ್ಣುವಿನ ತೊಡೆಗಳಿಗಿಂತಲೂ ದೊಡ್ಡದಾಗಿ ಬೆಳೆಸುತ್ತ ಹೋದರು. ವಿಷ್ಣು ತನ್ನ ತೊಡೆಗಳನ್ನು ಅವರಿಗಿಂತ ಮೇಲೆ ಬೆಳೆಸಿದನು. ಕಟ್ಟಕಡೆಗೆ ರಾಕ್ಷಸರ ಶರೀರಗಳಿಗಿಂತ ವಿಷ್ಣುವಿನ ತೊಡೆಗಳೇ ದೊಡ್ಡದಾದುವು. ಆಗ ವಿಷ್ಣು ತನ್ನ ಚಕ್ರವನ್ನು ಧ್ಯಾನಿಸಿದನು. ಕೂಡಲೇ ವಿಷ್ಣುಚಕ್ರವು ಬಂದು, ವಿಷ್ಣುವಿನ ತೊಡೆಯ ಮೇಲಿದ್ದ ಇಬ್ಬರು ರಾಕ್ಷಸರ ತಲೆಗಳನ್ನೂ ಕತ್ತರಿಸಿಬಿಟ್ಟಿತು. ಬೆಳೆದ ಅವರ ಮೆದುಳಿನ ಮುದ್ದೆಗಳೇ ನೀರಿಗೆ ಬಿದ್ದು ಭೂಮಿಯಾಯಿತು. ಆದುದರಿಂದಲೇ ಭೂಮಿಗೆ "ಮೇದಿನಿ" ಎಂಬ ಹೆಸರು ಬಂತು. ಮಣ್ಣು ತಿನ್ನಬಾರದ ವಸ್ತುವಾದುದೂ ಆಗಿನಿಂದಲೇ.

ಆ ಸ್ಥಿತಿಯಲ್ಲಿ ವಿಷ್ಣು ಆ ರಾಕ್ಷಸರೊಂದಿಗೆ, "ನಾನು ಎಷ್ಟೋ ಮಂದಿ ರಾಕ್ಷಸರನ್ನು ನೋಡಿರುವೆನಾದರೂ ಯುದ್ಧವಿದ್ಯೆಯಲ್ಲಿ ನಿಮಗೆ ಸಮಾನರಾದವರನ್ನು ನೋಡಲಿಲ್ಲ. ನಿಮ್ಮ ಯುದ್ಧನೈಪುಣ್ಯ ನೋಡಿ ನನಗೆ ಬಹಳ ಸಂತೋಷವಾಗಿದೆ. ನಿಮಗೇನಾದರೂ ಆಸೆಯಿದ್ದರೆ ಕೇಳಿರಿ. ನಿಮ್ಮ ಪ್ರಿಯವಾದ ಆಸೆ ನೆರವೇರುವ ಹಾಗೆ ವರ ಕೊಡುತ್ತೇನೆ" ಎಂದನು.

ದೇವಿಯ ಪ್ರಭಾವದಿಂದ ಮಾಯಾಮೋಹಿತರಾದ ಆ ರಾಕ್ಷಸರು, ವಿಷ್ಣುವಿನ ಮಾತು ಕೇಳಿ ಅಭಿಮಾನದಿಂದ ಬೀಗಿ, ವಿಷ್ಣುವನ್ನು ತಿರಸ್ಕಾರದಿಂದ ನೋಡುತ್ತ, "ನಾವು ನಿನ್ನನ್ನು ಕೇಳಿ ಪಡೆದುಕೊಳ್ಳುವವರೆಂಬಷ್ಟು ಗರ್ವವೋ ನಿನಗೆ? ನೀನು ನಮಗೆ ವರ ಕೊಡುವವನೇನು? ಬೇಕಾದರೆ ನೀನೇ ಕೇಳು. ನಾವು ಕೊಡುತ್ತೇವೆ" ಎಂದರು.

"ನಾನು ಕೇಳುವುದನ್ನು ನೀವು ಕೊಡುವಿರಾ? ನನ್ನ ಯುದ್ಧವನ್ನು ನೋಡಿ ನಿಮಗೆ ಆನಂದವಾ

## ವ್ಯಾಸನ ತಪಸ್ಸು

ಹೀಗೆ ಸೂತನು ಹೇಳಿ ಮುಗಿಸಲು ಶೌನಕಾದಿಗಳು ಅವನನ್ನು ಕುರಿತು, "ಮಹನೀಯರೇ, ಪ್ರಸಂಗವಶಾತ್ ಬೇರೆಬೇರೆ ಅಪೂರ್ವ ವಿವರಗಳನ್ನು ನಿಮ್ಮಿಂದ ಕೇಳಿದೆವು. ಇನ್ನು ಪುತ್ರವಾಂಛೆಯಿಂದ



ತಪಸ್ಸು ಮಾಡಲು ಹೋದ ವ್ಯಾಸನ ಸಂಗತಿ ಹಾಗೇ ಉಳಿದಿದೆ. ಅದನ್ನು ದಯವಿಟ್ಟು ಮುಂದುವರಿಸಿರಿ" ಎಂದರು. ಸೂತನು ಹೀಗೆಂದನು:

ನಾರದನು ಹೇಳಿದ ಮಂತ್ರವನ್ನು ಜಪಿಸುತ್ತಾ ಸುವರ್ಣಗಿರಿಯ ಮೇಲೆ ಕರ್ಣಿಕಾರವನದಲ್ಲಿ ವ್ಯಾಸನು ತಪಸ್ಸು ಮಾಡಲು ಪ್ರಾರಂಭಿಸಿದನು. ಆತನು ಶಕ್ತಿದೇವಿಯನ್ನು ಮನಸ್ಸಿನಲ್ಲಿ ನಿಲ್ಲಿಸಿ ತಪಸ್ಸು ಮಾಡಿಕೊಂಡಿರುವಾಗ, ಆತನ ತಪೋಜ್ವಾಲೆಗೆ ಭೂವ್ಯಾಕಾಶಗಳು ಕಂಪಿಸಿದುವು. ಇಂದ್ರನಂತೂ ತುಂಬ ಹೆದರಿ ಇತರ ದೇವತೆಗಳನ್ನು ತನ್ನೊಂದಿಗೆ ಕರೆದುಕೊಂಡು ಶಿವನ ಬಳಿಗೆ ಹೋಗಿ, "ಮಹಾದೇವಾ! ವ್ಯಾಸನು ತೀವ್ರವಾದ ತಪಸ್ಸಿನಲ್ಲಿ ಪ್ರಪಂಚವನ್ನು ಸುಡುತ್ತಿರುವನು. ಬಹುದೊಡ್ಡ ಅಪಾಯ ಬರಲಿದೆ. ನಮ್ಮನ್ನು ನೀನೇ ಕಾಪಾಡಬೇಕು" ಎಂದು ಪ್ರಾರ್ಥಿಸಿದನು.

"ಏನಾದರೂ ತಪಸ್ಸಿನಲ್ಲಿರುವವರಿಗೆ ಕೆಡುಕು ಮಾಡುವುದು ತಪ್ಪು. ಅವರು ಬೇರೆಯವರಿಗೆ ಕೆಡುಕು ಮಾಡಲಾರರು. ವ್ಯಾಸನು ಪುತ್ರನಿಗಾಗಿ ಶಕ್ತಿಯೊಂದಿಗೆ ಕೂಡಿದ ನನ್ನನ್ನು ಕುರಿತು ತಪಸ್ಸು ಮಾಡುತ್ತಿದ್ದಾನೆ. ನಾನು ಹೋಗಿ ನೋಡುತ್ತೇನೆ" ಎಂದು ದೇವತೆಗಳಿಗೆ ಅಭಯವಿತ್ತು, ಶಿವನು ವ್ಯಾಸನ ಮುಂದೆ ಪ್ರತ್ಯಕ್ಷನಾದನು. ಶಿವನಿಂದ ಪುತ್ರಭಾಗ್ಯ ಪಡೆಯುವ ವರವನ್ನು ಹೊಂದಿದ ಮೇಲೆ ವ್ಯಾಸನು ತನ್ನ ಆಶ್ರಮಕ್ಕೆ ಹಿಂದಿರುಗಿದನು.

ಆಶ್ರಮದಲ್ಲಿ ವ್ಯಾಸನು ಅರಣಿ ಮಥಿಸಿ ಅಗ್ನಿಯನ್ನು ಬೆಳಗಿಸಿ, ಇಂತಹ ಅಗ್ನಿಯಂತೆ ಬೆಳಗುವ ಮಗನನ್ನು ತನಗೆ ಕೊಡುವಂತಹ ಸ್ತ್ರೀ ಯಾವಳೋ? ಆದರೂ ಸ್ತ್ರೀಯ ಸಂಬಂಧವು ತನಗೆ ಪ್ರತಿಬಂಧಕವೇ! ಅದಕ್ಕೇನು ಉಪಾಯವೆಂದು ಆಲೋಚಿಸುತ್ತಿರುವಾಗ, ಆಕಾಶದಲ್ಲಿ ಘೃತಾಚಿ ಎಂಬ ದೇವಸುಂದರಿ ಕಾಣಿಸಿದಳು. ಅವಳ ಸಮೀಪದಲ್ಲಿ ಮನ್ಮಥನೂ ಇದ್ದನು. ಆ ಮನ್ಮಥನ ಪ್ರಭಾವದಿಂದ ವ್ಯಾಸನು ಪರವಶನಾಗಿ ಕೂಡ, ಸುಧಾರಿಸಿಕೊಳ್ಳುತ್ತ, "ಇವಳು ನನ್ನನ್ನು ಭಪ್ಪಗೊಳಿಸಲಿಕ್ಕಾಗಿಯೇ ಬಂದಿರಬೇಕು. ಆದರೂ ಇವಳೊಂದಿಗೆ ಸ್ವಲ್ಪಕಾಲ ಸುಖವಾಗಿರುವುದರಿಂದ ನಷ್ಟವೇನಿಲ್ಲ. ಹಾಗಂತ ಇವಳನ್ನು ನನ್ನೊಂದಿಗೇ ಇಟ್ಟುಕೊಂಡರೆ ಇತರ ಮುನಿಗಳು ನಗುತ್ತಾರೇನೋ? ಅವರು ನಕ್ಕ ಮಾತ್ರಕ್ಕೆ ನನಗಾಗುವ ನಷ್ಟವೇನಿದೆ? ಬರಲಿ, ಬಂದ ಮಾತ್ರಕ್ಕೆ ಇವಳು ನನ್ನ ಮೇಲೆ ಮನಸ್ಸಿಟ್ಟು, ಸುಖನೀಡುವಳೆಂದು ಹೇಗೆ ನಂಬುವುದು? ಹಿಂದೆ ಊರ್ವಶಿ ಪುರೂರವನಿಗೆ ಮಾಡಿದ ಹಾಗೆ ವಿರಹವೇದನೆಯಲ್ಲಿ ಮುಳುಗಿಸಿಬಿಡುವಳೋ? ಪುತ್ರನೇನೋ ಬೇಕು, ಹೆಣ್ಣು ಮಾತ್ರ ಬೇಡವೆಂದರೆ ಹೇಗೆ ಸಾಧ್ಯವೋ? ಅದಕ್ಕೇನು ಉಪಾಯವೋ?" ಎಂದು ತನ್ನೊಳಗೇ ಮಥನಪಡಲಾರಂಭಿಸಿದನು. ಆಗ ಶೌನಕಾದಿ ಮುನಿಗಳು ಸೂತನ ಮಾತಿಗೆ



ಅಡ್ಡ ಬಂದು, "ಆ ಪುರೂರವನು ಯಾರು ? ಅವನಿಗೇನಾಯಿತು ?" ಎಂದು ಕೇಳಿದರು. ಸೂತನು ಹೀಗೆ ಹೇಳಿದನು :

## ಬುಧನ ಜನ್ಮ

ದೇವಗುರುವಾದ ಬೃಹಸ್ಪತಿಗೆ ತಾರೆ ಎಂಬ ತ್ರಿಲೋಕಸುಂದರಿ ಹೆಂಡತಿಯಾಗಿದ್ದಳು. ಒಂದು ದಿನ ಅವಳು ಬೃಹಸ್ಪತಿಯ ಶಿಷ್ಯನಾದ ಚಂದ್ರನ ಮನೆಗೆ ಹೋದಳು. ಅವಳನ್ನು ನೋಡಿ ಚಂದ್ರನು ಮೋಹಗೊಂಡನು. ಅವಳೂ ಚಂದ್ರನನ್ನು ಮೋಹಿಸಿದ್ದಳು. ಇಬ್ಬರ ಮನಸ್ಸುಗಳೂ ಒಂದಾದುದರಿಂದ ತಾರೆ ಚಂದ್ರನ ಮನೆಯಲ್ಲೇ ಇದ್ದುಬಿಟ್ಟಳು.

ಅವಳು ಮತ್ತೆ ತನ್ನ ಮನೆಗೆ ಹಿಂದಿರುಗಿ ಬಾರದಿರುವುದನ್ನು ನೋಡಿ, ಬೃಹಸ್ಪತಿ ಅವಳನ್ನು ಕರೆದುಕೊಂಡು ಬರಲು ಒಬ್ಬ ಶಿಷ್ಯನನ್ನು ಕಳುಹಿಸಿದನು. ತಾರೆ ಶಿಷ್ಯನ ಮಾತನ್ನು ಲಕ್ಷ್ಯಮಾಡದೆ ಶಿಷ್ಯನನ್ನು ಸುಮ್ಮನೆ ಹಿಂದಿರುಗಿಸಿಬಿಟ್ಟಳು. ಬೃಹಸ್ಪತಿ ಮತ್ತೆ ಅನೇಕ ಮಂದಿಯನ್ನು ಕಳುಹಿಸಿದರೂ ಏನೂ ಪ್ರಯೋಜನವಾಗಲಿಲ್ಲ. ಕಡೆಗೆ ಬೃಹಸ್ಪತಿ ಕೋಪದಿಂದ ಉರಿಯುತ್ತ ತಾನೇ ಚಂದ್ರನ ಮನೆಗೆ ಹೋದನು. ಅವನನ್ನು ನೋಡಿ ಚಂದ್ರನು "ನೀವೇ ಬಂದಿರೇನು ?" ಎಂದು ಗಹಗಹಿಸಿ ನಕ್ಕನು.

ಬೃಹಸ್ಪತಿ ಸಂತಾಪದಿಂದ, "ಎಲೋ ಗುರುದ್ರೋಹಿ ! ಗುರುಪತ್ನಿ ತಾಯಿಗೆ ಸಮಾನಳೆಂದು ತಿಳಿಯದೇನು ? ಬ್ರಾಹ್ಮಣನನ್ನು ಕೊಲ್ಲುವವನೂ, ಹೆಂಡಕುಡುಕನೂ, ಚಿನ್ನವನ್ನು ಅಪಹರಿಸುವವನೂ, ಗುರುಪತ್ನಿಯನ್ನು ಬಯಸುವವನೂ, ಈ ನಾಲ್ವರೊಂದಿಗೆ ಸ್ನೇಹಮಾಡುವವನೂ ಪಂಚ ಮಹಾಪಾತಕರು ! ಇನ್ನು ನಿನಗೆಲ್ಲಿಯ ಸ್ವರ್ಗಪ್ರಾಪ್ತಿ ? ಈ ಸಂಗತಿ ತಿಳಿದರೆ ದೇವೇಂದ್ರನು ನಿನ್ನನ್ನು ಶಿಕ್ಷಿಸದೆ ಬಿಡಲಾರ !" ಎಂದನು.

ಅದಕ್ಕೆ ಚಂದ್ರನು ಶಾಂತಸ್ವರದಿಂದ, "ಸ್ವಾಮಿ ! ನಿಮ್ಮಂತಹ ಬ್ರಾಹ್ಮಣರಿಗೆ ಶಾಂತಗುಣವೇ ಚಂದ. ಕೋಪವೇ ಬರಬಾರದು. ಇವಳೇನು ಇಲ್ಲಿಯೇ ಇದ್ದುಬಿಡುವಳೇನು ? ನಾಳೆಯೋ ನಾಳಿದ್ದೋ ಬಂದೇ ಬರುತ್ತಾಳೆ. ನಾಲ್ಕಾರು ದಿನ ಇದ್ದ ಮಾತ್ರಕ್ಕೆ ಏನು ಮುಳುಗಿಹೋಯಿತು ?" ಎಂದನು.

ಚಂದ್ರನಿಗೆ ಏನು ಉತ್ತರ ಕೊಡುವುದೆಂದು ತೋರದೆ ಬೃಹಸ್ಪತಿ ಮನೆಗೆ ಹಿಂದಿರುಗಿದನು. ಮತ್ತೆ ಕೆಲವು ದಿನಗಳವರೆಗೆ ಹೆಂಡತಿಯ ದಾರಿ ನೋಡಿದನು. ಹೆಂಡತಿ ಬರಲೇ ಇಲ್ಲ. ಬೃಹಸ್ಪತಿಗೆ ವಿಚಾರದಿಂದ ತಲೆನೋವು ಹತ್ತಿತು. ಅವನು ತಡೆಯಲಾರದೆ ಮತ್ತೆ ಚಂದ್ರನ ಮನೆಗೆ ಹೋದನು. ಹೊರಗಿದ್ದ ಕಾವಲುಗಾರನು ಅವನನ್ನು ಮನೆಯೊಳಗೆ ಬಿಡಲಿಲ್ಲ.

ಆಗ ಬೃಹಸ್ಪತಿ ದೊಡ್ಡ ಕಂಠದಿಂದ "ಎಲವೋ ದುರುಳ ಚಂದ್ರಾ ! ಎಂಥಾ ಘೋರಪಾಪಕ್ಕೆ ಸೊಂಟ ಕಟ್ಟಿದೆಯೋ ? ನನ್ನ ಹೆಂಡತಿಯನ್ನು ನಾನು ನೋಡ

ಲಿಕ್ಕೂ ಇಲ್ಲದಂತೆ ಬಾಗಿಲಲ್ಲಿ ಅಡ್ಡಗಟ್ಟಿಸುವೆಯಾ? ನನ್ನ ಹೆಂಡತಿ ನಿನಗೆ ಸ್ವಂತದವಳಾಗುವುದೂ, ನನಗೆ ದೂರದವಳಾಗುವುದೂ ಎಲ್ಲಾದರೂ ಉಂಟೇ? ಶಾಪ ಕೊಟ್ಟು ನಿನ್ನನ್ನು ಏನು ಮಾಡುವೆನೋ ನೋಡು!" ಎಂದು ಕೂಗಿದನು.

ಆಗ ಚಂದ್ರನು ಹೊರಗೆ ಬಂದು, "ಏಕೆ ನನ್ನ ಹೆಂಡತಿ ನನ್ನ ಹೆಂಡತಿ ಅಂತ ಕೂಗುವಿರೋ? ಸಮಸ್ತ ಸುಲಕ್ಷಣಗಳಿಂದ ತುಂಬಿದ ತಾರೆ ನಿಮ್ಮಂಥ ದರಿದ್ರರ ಮನೆಯಲ್ಲಿರಲು ತಕ್ಕವಳೇನು? ನಿಮಗೆ ಹೆಂಡತಿ ಬೇಕಾದರೆ ತಕ್ಕವಳನ್ನು ಕಟ್ಟಿಕೊಂಡು ಸುಖವಾಗಿರಿ. ನೀವು ಎಲ್ಲಾ ಶಾಸ್ತ್ರಗಳನ್ನು ಓದಿಯೂ ಏನೂ ಪ್ರಯೋಜನವಿಲ್ಲ. ಹೆಣ್ಣು ತನಗೆ ತಕ್ಕವನೊಂದಿಗೇ ಇರುವಳೆಂದೂ ತಕ್ಕವನಲ್ಲದವನನ್ನು ಬಿಟ್ಟುಬಿಡುವಳೆಂದೂ ನಿಮಗೆ ಗೊತ್ತಿಲ್ಲದೆ ಹೋಯಿತು. ಇಷ್ಟು ಮಾತೇಕೆ? ನಾನು ತಾರೆಯನ್ನು ಬಿಟ್ಟುಕೊಡುವವನಲ್ಲ. ಮಾತಾಡದೆ ಹೋಗಿಬಿಡಿ. ಅಸೂಯೆಯಿಂದ ನೀವು ಕೊಡುವ ಶಾಪಗೀಪಗಳು ನನಗೆ ತಾಗಲಾರವು. ನಿಮ್ಮಿಷ್ಟ ಬಂದಂತೆ ಮಾಡಿರಿ!" ಎಂದು ಜಾಡಿಸಿ ಹೇಳಿದನು.

ಬೃಹಸ್ಪತಿ ಮತ್ತೇನೂ ಮಾಡಲಾಗದೆ ಇಂದ್ರನ ಬಳಿಗೆ ಹೋಗಿ ಕುಳಿತನು. ಇಂದ್ರನು ಅವನನ್ನು ಗೌರವದಿಂದ ಕೂಡಿಸಿ, "ಸ್ವಾಮೀ, ಚಿಂತೆಯಲ್ಲಿರುವಿರೇಕೆ?" ಎಂದು ಕೇಳಿದನು. "ಅದನ್ನು ಏನೆಂದು ಹೇಳಲಿ? ನನ್ನ ಹೆಂಡತಿಯನು ಚಂದ್ರನು ಅಪಹರಿಸಿ, ಕೇಳಿದರೆ ಬಿಡುವುದಿಲ್ಲ ಹೋಗೆನ್ನುತ್ತಾನೆ. ನನ ಹೆಂಡತಿಯನು ನನಗೆ ದಕ್ಕಿಸಬಲ್ಲೆಯಾ ಇಂದ್ರಾ?" ಎಂದನು ಬೃಹಸ್ಪತಿ.

"ನೀವು ಚಿಂತಿಸಬೇಡಿ ಸ್ವಾಮಿ. ನಾನು ನಿಮ್ಮ ಹೆಂಡತಿಯನ್ನು ಬಿಡಿಸುತ್ತೇನೆ. ಚಂದ್ರನು ಮೊಂಡಿಗೆ ಇಳಿದರೆ ವಜ್ರಾಯುಧದಿಂದ ಹೊಡೆದು ಅವನ ಮದ ಅಡಗಿಸುತ್ತೇನೆ. ಇಷ್ಟೊಂದು ದುಷ್ಟತನವೇ ಅವನಿಗೆ?" ಎಂದು ಇಂದ್ರನು ಒಬ್ಬ ದೂತನಿಗೆ ಹೇಳತಕ್ಕುದನ್ನು ಹೇಳಿ ಚಂದ್ರನ ಬಳಿಗೆ ಕಳುಹಿಸಿದನು.

ಇಂದ್ರನ ದೂತನು ಇಂದ್ರನ ಮಾತಿನಂತೆ ಚಂದ್ರನಿಗೆ ಏನೇನೋ ನೀತಿಗಳನ್ನು ಹೇಳಿ, ತಾರೆಯನ್ನು ಹಿಂದಿರುಗಿಸಲು ಒತ್ತಾಯಿಸಿದನು. ಚಂದ್ರನು ಕೋಪದಿಂದ, "ಇಂದ್ರನು ಎಂತಹ ನೀತಿ ಮಾರ್ಗದವನೆಂಬುದು ನನಗೂ ಗೊತ್ತಿದೆ. ತಾರೆ ನನ್ನ ಪ್ರೇಮವನ್ನು ನಂಬಿಕೊಂಡು ಬಂದಿದ್ದಾಳೆ. ಅವಳನ್ನು ಹೇಗೆ ಬಿಟ್ಟೇನು? ನಾನು ಬಿಟ್ಟರೆ ಮಾತ್ರ ಅವಳು ಗಂಡನ ಬಳಿಗೆ ಹೋಗುವಳೇನು? ನಾನು ಪ್ರಾಣವನ್ನಾದರೂ ಬಿಡುವೆನೇ ಹೊರತು ತಾರೆಯನ್ನು ಬಿಡಲಾರೆನೆಂದು ಇಂದ್ರನೊಂದಿಗೆ ಹೇಳು" ಎಂದನು ಖಂಡಿತ ಸ್ವರದಲ್ಲಿ.



# ವರ್ಚಸ್ಸು

ವಜ್ರಗಿರಿ ರಾಜನ ಬಾವಮೈದುನನಾದ ನೀಲಾಂಗನು ದೊಡ್ಡ ಗರ್ವಿಷ್ಠನಾಗಿದ್ದನು. ಅವನು ಒಂದು ದಿನ ಯಾವುದೋ ಅಲ್ಪಕಾರಣಕ್ಕಾಗಿ ರಾಜಪುರೋಹಿತನ ಮಗನನ್ನು ಕ್ರೂರವಾಗಿ ಹೊಡೆದನು. ಆ ಹುಡುಗ ನಗರದ ಕೋತ್ವಾಲನ ಬಳಿಗೆ ಹೋಗಿ, ತನ್ನ ಗಾಯಗಳನ್ನು ತೋರಿಸಿ, ನೀಲಾಂಗನ ಮೇಲೆ ದೂರು ಹೇಳಿದನು.

ಈ ಸಂಗತಿ ತಿಳಿದು ನೀಲಾಂಗನು ತನ್ನ ಅಕ್ಕನಾದ ರಾಣಿಯ ಹತ್ತಿರ ತನಗೆ ಶಿಕ್ಷೆ ಬೀಳದಂತೆ ನೋಡಬೇಕೆಂದು ಕೇಳಿಕೊಂಡನು.

ರಾಣಿ ಕೋತ್ವಾಲನ ಬಳಿಗೆ ಹೋಗಿ, ತನ್ನ ತಮ್ಮನ ಮೇಲೆ ಬಂದ ಫಿರ್ಯಾದನ್ನು ಹೊಡೆದುಹಾಕಬೇಕೆಂದು ಒತ್ತಾಯ ಮಾಡಿ ಹೇಳಿದಳು.

"ನೀವೇ ಹೀಗೆ ಹೇಳುವುದಾದರೆ ಹಾಗೇ ಮಾಡುತ್ತೇನೆ" ಎಂದನು ಕೋತ್ವಾಲ. ರಾಣಿ ಸಂತೋಷಪಟ್ಟು ತನ್ನ ಕೊರಳಲ್ಲಿದ್ದ ಹಾರವನ್ನು ತೆಗೆದು ಅವನಿಗೆ ಕೊಡಲು ಚಾಚಿದಳು. ಅಷ್ಟರಲ್ಲಿ ಅವಳ ಹಿಂದೆಯೇ ಇದ್ದ ಯಾವನೋ ಆ ಹಾರವನ್ನು ಎಳೆದುಕೊಂಡು ಓಡಿಹೋದನು. ರಾಣಿ ಅತ್ಯಂತ ಕೋಪದಿಂದ ಆ ಕಳ್ಳನನ್ನು ಹಿಡಿದು ಶಿಕ್ಷಿಸಬೇಕೆಂದು ಕೋತ್ವಾಲನಿಗೆ ಆಜ್ಞೆಮಾಡಿದಳು.

"ಮಹಾರಾಣೀ, ಆ ಕಳ್ಳ ತುಂಬಾ ವರ್ಚಸ್ಸುಳ್ಳವನು" ಎಂದನು ಕೋತ್ವಾಲ.

ಆ ಮಾತು ಕೇಳಿ ರಾಣಿಗೆ ಬುದ್ಧಿ ಬಂತು. ತನ್ನ ತಮ್ಮನನ್ನು ವಿಚಾರಿಸಿ ತಕ್ಕ ಶಿಕ್ಷೆ ವಿಧಿಸುವಂತೆ ಕೋತ್ವಾಲನೊಂದಿಗೆ ಹೇಳಿದಳು. ಆ ಕೂಡಲೇ ಕೋತ್ವಾಲನ ಮಗನು ಬಂದು, ತಾನು ಎಳೆದುಕೊಂಡ ಹಾರವನ್ನು ರಾಣಿಗೆ ಕೊಟ್ಟುಬಿಟ್ಟನು.





# ವೇಷಧಾರಿ

ಒಂದು ಊರಿನಲ್ಲಿ ಗುರುರಾಜನೆಂಬ ಧನವಂತನಿದ್ದ. ಅವನು ಎಷ್ಟು ಧನವಂತನೋ ಅಷ್ಟು ದೊಡ್ಡ ಲೋಭಿ.

ಒಂದುಸಾರಿ ಆ ಊರಿಗೆ ಹಗಲು ವೇಷಗಾರನೊಬ್ಬ ಬಂದನು. ಅವನು ಸನ್ಯಾಸಿಯ ವೇಷ ಹಾಕಿಕೊಂಡು, "ಜೈ ಸೀತಾರಾಂ. ಭವತಿ ಭಿಕ್ಷಾಂದೇಹಿ" ಎನ್ನುತ್ತಾ ಗುರುರಾಜನ ಮನೆಯ ಮುಂದೆ ಬಂದನು.

ಸನ್ಯಾಸಿಯ ಕಂಠಸ್ವರವು ಗುರುರಾಜನಿಗೆ ಕರ್ಣಕಠೋರವಾಗಿ ಕೇಳಿಸಿತು. ಅವನು ಹೊರಗೆ ಬಂದು ಸನ್ಯಾಸಿಯನ್ನು ಮೇಲೂ ಕೆಳಗೂ ನೋಡಿ, "ನಿನಗೇನು ಕೇಡು ಬಂತು? ಕುಂಟನೋ ಕುರುಡನೋ? ಹೋಗು ಹೋಗು. ಸೋಮಾರಿ ದೂಮ! ಕೆಲಸ ಮಾಡಿ ಬದುಕು" ಎಂದು ಹೇಳಿ ಬಾಗಿಲು ಮುಚ್ಚಿಕೊಂಡನು.

ಮರುದಿನ ಆ ವೇಷಗಾರನು ಕುರುಡನ ವೇಷ ಹಾಕಿಕೊಂಡು ಗುರುರಾಜನ ಮನೆಯ ಮುಂದೆ ಬಂದು, "ಅಮ್ಮಾ, ತಾಯೀ! ಕುರುಡನಿಗೆ ಧರ್ಮ ಮಾಡಿ ಪುಣ್ಯಪಡೆಯಿರೀ!" ಎಂದು ದೀನ ಧ್ವನಿಯಿಂದ ಕೂಗಿದನು.

ಅವನನ್ನು ನೋಡಿ ಗುರುರಾಜ ಕೋಪದಿಂದ, "ಕುರುಡನಾದ ಮಾತ್ರಕ್ಕೆ ಬೇಡಲು ಬಂದೆಯೇನು? ಕುಂಟನಲ್ಲ ಮೂಗನಲ್ಲ, ನಡೆನಡೆ! ಇಂತಹ ಪಾಪಿಗಳು ನನಗೆ ಪುಣ್ಯ ತಂದು ಕೊಡುತ್ತಾರಂತೆ! ಅರ್ಥವಿಲ್ಲದ ಮಾತು!" ಎಂದು ಹೇಳುತ್ತಾ ಬಾಗಿಲು ಹಾಕಿದನು.

ಮರುದಿನ ಅದೇ ವೇಷಗಾರನು ಮೂಗನಂತೆ ನಟಿಸುತ್ತ ಗಂಟೆ ಬಾರಿಸಿಕೊಂಡು ಗುರುರಾಜನ ಮನೆಗೆ ಬಂದನು. ಅವನನ್ನು ನೋಡಿ ಗುರುರಾಜ, "ನಿನಗೇನು ಬಂತು ಧಾಡಿ?" ಎಂದು ಕೇಳಿದನು.

ವೇಷಧಾರಿ ಬಾಯಿ ತೆರೆದು ಮೂಗನಂತೆ ಅಭಿನಯ ತೋರಿಸಿದನು. "ಓಹೊ! ಮೂಗನೋ? ಮೂಗನಾದ ಮಾತ್ರಕ್ಕೆ ಭಿಕ್ಷೆ ಬೇಡಲು ಬರುವೆಯಾ? ಕೈ ಕಾಲುಗಳು ಸರಿಯಾಗಿವೆಯಲ್ಲಾ? ಕೆಲಸ ಮಾಡಿ ಬದುಕಬಾರದೇ? ಜಡಸೋಮಾರಿಗೆ ಬಡೆದದ್ದೇ ಕಾರಣ!" ಎಂದು ಜರೆಯುತ್ತ ಬಾಗಿಲು ಹಾಕಿಕೊಂಡನು ಗುರುರಾಜ.

ಇದಾದ ಮರುದಿನ ಗುರುರಾಜನ ಮನೆಯ ಅಡಿಗೆ ಕೋಣೆಯಲ್ಲಿ ಒಂದು ಹಾವು ಕಂಡು ಬಂತು.

ವೈ. ವಿ. ರಾಮಯ್ಯ

ಗುರುರಾಜನ ಹೆಂಡತಿ ಹೆದರಿ ಓಡುತ್ತಾ, ಜಗಲಿಯಲ್ಲಿ ಕುಳಿತಿದ್ದ ಗಂಡನ ಬಳಿಗೆ ಬಂದು, "ಅಮ್ಮಮ್ಮೋ! ಹಾವು! ನಾಗರ ಹಾವು ಅಡಿಗೇ ಮನೇಲಿ!" ಎಂದು ಕೂಗಿದಳು.

ಗುರುರಾಜನು ಗಡಿಬಿಡಿಯಿಂದ ಒಳಗೆ ಹೋಗಿ, ಮಡಿಕೆಗಳ ನಡುವೆ ತಿರುಗುತ್ತಿದ್ದ ಹಾವನ್ನು ನೋಡಿ, "ಹಾವು! ಹಾವು!" ಎಂದು ಕೂಗುತ್ತಾ, ಹೊರಗೆ ಓಡಿದನು.

ನೆರೆಕರೆಯವರೆಲ್ಲಾ ಓಡಿ ಬಂದು, "ಎಲ್ಲಿದೆ ಹಾವು? ಯಾವ ಜಾತಿಯದು? ಎಂತಹ ಬಣ್ಣ?" ಎಂದು ಮುಂತಾಗಿ ಬೇಡದ ಪ್ರಶ್ನೆಗಳನ್ನು ಮಾಡಿದರೇ ಹೊರತು, ಒಬ್ಬರಾದರೂ ಧೈರ್ಯದಿಂದ ಒಳಗೆ ಪ್ರವೇಶಿಸುವ ಸಾಹಸಕ್ಕೆ ಹೋಗಲಿಲ್ಲ.

ಆ ಸಮಯದಲ್ಲಿ ಆ ಕಡೆಗೆ ಒಬ್ಬ ಹಾವಾಡಿಗನು ಬಂದನು. ಅವನನ್ನು ನೋಡಿ ಗುರುರಾಜನ ಪ್ರಾಣ ಚೇತರಿಸಿಕೊಂಡಿತು. ಅವನು ಮುಖದಲ್ಲಿಯ ಬೆವರನ್ನು ಒರೆಸಿಕೊಳ್ಳುತ್ತ, "ಬಾರಪ್ಪ, ನಮ್ಮ ಅಡಿಗೇ ಕೋಣೆಯೊಳಗೆ ಒಂದು ಹಾವು ಸೇರಿದೆ. ಅದನ್ನು ಹಿಡಿದು ನಮ್ಮನ್ನು ಕಾಪಾಡು ಸಮಯಕ್ಕೆ ಸರಿಯಾಗಿ ದೇವರು ನಿನ್ನನ್ನು ಬರಿಸಿದ" ಎಂದನು.

"ನಾಗರ ಹಾವೇನು? ಕಾಣುತ್ತಿದೆಯೇನು?" ಎಂದು ಕೇಳಿದ ಹಾವಾಡಿಗ, "ಕಾಣುವುದಿಲ್ಲ. ಎಲ್ಲಿಯೋ ತೂರಿಕೊಂಡಿದೆ, ಹೊರಗಂತೂ ಹೋಗಿಲ್ಲ," ಎಂದನು ಗುರುರಾಜ.

"ಹಾಗಾದರೆ ಕಷ್ಟವೇ. ನಾಗರ ಹಾವಿನ ಹಗೆ ಹನ್ನೆರಡು ವರ್ಷವಂತೆ. ಒಂದೇಟಿಗೆ ಕೊಲ್ಲದಿದ್ದರೆ ಬಹಳ ಕಷ್ಟ ಸ್ವಾಮಿ! ಗ್ರಹಚಾರ ಯಾರಿಗೆ ಬೇಕು?" ಎಂದ ಹಾವಾಡಿಗ.

"ನೀನೇ ಹೀಗೆ ಹೇಳಿದರೆ ನಮ್ಮಂಥವರ ಗತಿ ಏನಪ್ಪಾ? ನಿನ್ನ ಕಷ್ಟಕ್ಕೆ ತಕ್ಕ ಹಾಗೆ ಕೊಡುತ್ತೇನಪ್ಪಾ" ಎಂದು ದೀನನಾಗಿ ಹೇಳಿದ ಗುರುರಾಜ.

ಹಾವಾಡಿಗನು ತುಸು ಚೌಕಾಸಿ ಮಾಡಿ, ನೂರು ರೂಪಾಯಿಗೆ ಕೆಲಸ ಕುದುರಿಸಿಕೊಂಡು ಅಡಿಗೆ ಮನೆಗೆ ಹೋಗಿ ಮನೆಯೊಳಗೆಲ್ಲಾ ಹುಡುಕಿದನು. ಹಾವು



ಎಲ್ಲಿಯೂ ಕಾಣಲಿಲ್ಲ. ಹಾವಾಡಿಗನು ನಾಗಸ್ವರ ಊದಲು ಶುರು ಮಾಡಿದನು. ಆಗ ಗೋಡೆಯ ಸಂದಿನೊಳಗಿನಿಂದ ಹಾವು ಅವನ ಇದಿರಿಗೆ ಬಂದು ತಲೆಯಾಡಿಸಲು ತೊಡಗಿತು. ಹಾವಾಡಿಗನು ತಟ್ಟನೆ ಅದರ ತಲೆ ಹಿಡಿದುಕೊಂಡು ಅದನ್ನು ಬುಟ್ಟಿಯೊಳಗೆ ಸೇರಿಸಿ, ಮುಚ್ಚಳವನ್ನು ಗಟ್ಟಿಯಾಗಿ ಒತ್ತಿದನು.

ಈಗ ಗುರುರಾಜನಿಗೆ ಹೋದ ಪ್ರಾಣ ಬಂದ ಹಾಗಾಯಿತು. ಆದರೆ ನೂರು ರೂಪಾಯಿಯನ್ನು ಹಾವಾಡಿಗನಿಗೆ ಕೊಡುವಾಗ, ಮತ್ತೆ ಪ್ರಾಣ ಹೋಗುತ್ತಿರುವಷ್ಟು ಸಂಕಟವೆನಿಸಿತು. ಹಾವಾಡಿಗನು ಹಣ ತೆಗೆದುಕೊಂಡು, ಗುರುರಾಜನನ್ನು ಹೊಗಳುತ್ತಾ ಹೊರಟುಹೋದನು.

ಆಮೇಲೆ ವಿಚಾರ ನಡೆಸಿದಾಗ ಆ ಹಾವಾಡಿಗನು ಕೇವಲ ವೇಷಗಾರನೆಂದೂ ತನ್ನ ಸಾಕು ಹಾವನ್ನೇ ಗುರುರಾಜನ ಮನೆಯೊಳಗೆ ಕಳುಹಿಸಿದ್ದಾನೆಂದೂ ಗೊತ್ತಾಯಿತು.

ಇದನ್ನು ತಿಳಿದು ಗುರುರಾಜನಿಗೆ ಸಹಿಸಲಾಗ ದಷ್ಟು ಕೋಪ ಬಂತು. ಅವನು ನೆಟ್ಟಗೆ ಗ್ರಾಮಾಧಿ ಕಾರಿಯ ಬಳಿಗೆ ಹೋಗಿ, ವೇಷಗಾರನು ತನ್ನನ್ನು ಮೋಸಮಾಡಿದನೆಂದು, ಅವನು ಕಿತ್ತುಕೊಂಡ ತನ್ನ ಹಣವನ್ನು ತನಗೆ ವಾಪಾಸು ಕೊಡಿಸಬೇಕೆಂದು ಕೇಳಿ ಕೊಂಡನು.

ಗ್ರಾಮಾಧಿಕಾರಿ ಆ ವೇಷಗಾರನನ್ನು ಕರೆಯಿಸಿ ವಿಚಾರಿಸಲು, ಅವನು ನಡೆದ ಸಂಗತಿಯನ್ನೆಲ್ಲಾ ಹೇಳಿ, "ಗುರುರಾಜರಂತಹ ಶ್ರೀಮಂತರೇ ನಮ್ಮಂಥ ಕಲೆಗಾರರನ್ನು ಆದರಿಸದೆಹೋದರೆ ನಮ್ಮ ಗತಿ ಏನಾಗಬೇಕು ಸ್ವಾಮಿ?" ಎಂದನು.

"ನೀನು ನಿನ್ನ ಕಲೆಯನ್ನು ಪ್ರದರ್ಶಿಸಿ ಬಹು ಮಾನ ಪಡೆದರೆ ಆಕ್ಷೇಪಣೆ ಏನಿಲ್ಲ. ಆದರೆ ನೀನು ಗುರುರಾಜನನ್ನು ಮೋಸಪಡಿಸಿರುವೆ. ಅದು ತಪ್ಪೇ. ಆದುದರಿಂದ ಅವರು ಕೊಟ್ಟ ಹಣವನ್ನು ಅವರಿಗೇ ತಿರುಗಿ ಕೊಟ್ಟುಬಿಡು" ಎಂದ ಗ್ರಾಮಾಧಿಕಾರಿ. ವೇಷಗಾರನು ನೂರು ರೂಪಾಯಿಗಳನ್ನು ತಂದು ಗುರುರಾಜನಿಗೆ ಕೊಟ್ಟುಬಿಟ್ಟನು.

ಆಗ ಗ್ರಾಮಾಧಿಕಾರಿ ಗುರುರಾಜನೊಂದಿಗೆ, "ಹಣ್ಣು ಕಾಯಿಗಳಿರುವ ಮರವನ್ನೇ ಕಲ್ಲಿನಿಂದ ಹೊಡೆಯುತ್ತಾರೆ. ಇರುವವರನ್ನೇ ಇಲ್ಲದವರು ಪೀಡಿಸುತ್ತಾರೆ. ಆದುದರಿಂದ ನಿಮ್ಮಂಥವರು ಈ ಬಡ ವೇಷಧಾರಿಗೆ ದಾನ ಮಾಡುವುದೇ ಧರ್ಮ. ಅವನಿ ಗೊಂದು ಇಪ್ಪತ್ತೈದು ರೂಪಾಯಿಗಳನ್ನು ಕೊಟ್ಟು ಬಿಡಿ" ಎಂದನು. ಗುರುರಾಜನು ಆ ವೇಷಧಾರಿಗೆ ಸಂತೋಷದಿಂದ ಇಪ್ಪತ್ತೈದು ರೂಪಾಯಿಗಳನ್ನು ಕೊಟ್ಟನು. ಇದರಿಂದ ಅವನು ಗುಣಪಾಠ ಕಲಿತು ತನ್ನ ಲೋಭತನದ ಗುಣವನ್ನೂ ಬಿಟ್ಟನು.



# ಸ ಮಾ ನ ತೆ

**ಸೋ**ಮಪ್ಪನೂ ಭೀಮಪ್ಪನೂ ನೆರೆಹೊರೆ ಮನೆಯವರಾಗಿದ್ದರು. ಆದರೆ ಭೀಮಪ್ಪ ಲಕ್ಷಾಧಿಕಾರಿ. ಸೋಮಪ್ಪ ತುಂಬ ಬಡವ.

ಭೀಮಪ್ಪನಿಗೆ ಧನವಿದ್ದರೂ ಮಕ್ಕಳಿಲ್ಲ. ಸೋಮಪ್ಪನಿಗೆ ಬಡತನದ ಜತೆಗೆ ನಾಲ್ವರು ಗಂಡು ಮಕ್ಕಳೂ ಇರುವರು.

ಭೀಮಪ್ಪನಿಗೆ ಇನ್ನು ತನಗೆ ಮಕ್ಕಳಾಗುವುದಿಲ್ಲ ಎಂಬ ಪರಿಸ್ಥಿತಿ ಬಂದಾಗ ಯಾರ ಹುಡುಗನನ್ನಾದರೂ ದತ್ತಕ್ಕೆ ತೆಗೆದುಕೊಳ್ಳುವ ಆಲೋಚನೆ ಬಂತು.

ದೂರದೂರ ಹುಡುಕಿಕೊಂಡು ಹೋಗುವುದರ ಬದಲಿಗೆ ಸೋಮಪ್ಪನ ನಾಲ್ವರು ಮಗಂದಿರಲ್ಲಿ ಒಬ್ಬನನ್ನು ಮಾಡಿಕೊಳ್ಳೋಣವೆಂದು ಅವನಿಗೆ ತೋರಿತು.

ಒಂದು ದಿನ ಅವನು ಈ ಸಂಗತಿಯನ್ನು ಸೋಮಪ್ಪನಿಗೆ ತಿಳಿಸಿದನು. ತನ್ನ ಸೂಚನೆಯನ್ನು ಸೋಮಪ್ಪ ಸಂತೋಷದಿಂದ ಒಪ್ಪಿಕೊಳ್ಳುವನೆಂದು ಭೀಮಪ್ಪ ಎಣಿಸಿದ್ದನು. ಆದರೆ ಸೋಮಪ್ಪ ತನ್ನ ಮಗನೊಬ್ಬನನ್ನು ಭೀಮಪ್ಪನಿಗೆ ದತ್ತಕೊಡಲು ಒಪ್ಪಲಿಲ್ಲ.

"ಇದೇನು ? ನಿನ್ನ ಮಗನು ಲಕ್ಷಾಧಿಕಾರಿಯಾಗಿ ಸುಖಪಡುವುದು ನಿನಗಿಷ್ಟವಿಲ್ಲವೇ ?" ಎಂದು ಭೀಮಪ್ಪ ಆಶ್ಚರ್ಯದಿಂದ ಕೇಳಿದನು.

"ಇಷ್ಟವಿಲ್ಲ. ನನ್ನ ಮಗಂದಿರೆಲ್ಲ ನನ್ನ ರಕ್ತವನ್ನು ಹಂಚಿಕೊಂಡು ಹುಟ್ಟಿದವರೇ. ಅವರಲ್ಲೊಬ್ಬನು ಲಕ್ಷಾಧಿಕಾರಿಯಾಗಿ ಉಳಿದ ಮೂವರೂ ಬಡವರಾಗಿರುವುದು ನನಗಿಷ್ಟವಿಲ್ಲ. ಆದರಿಂದ ಆ ಮಕ್ಕಳಿಗೂ ಸುಖವಾಗದು. ನನ್ನ ಶಕ್ತ್ಯಾನುಸಾರವಾಗಿ ಅವರನ್ನು ಸಮಾನತೆಯಿಂದಲೇ ಬೆಳೆಸಿ ಪೋಷಿಸುತ್ತೇನೆ. ಆಮೇಲೆ ದೇವರ ಕೃಪೆಯಿದ್ದ ಹಾಗೆ ಆಗುತ್ತದೆ !" ಎಂದ ಸೋಮಪ್ಪ.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

## ಗೆದ್ದ ಶೀರ್ಷಿಕೆಗಳು ೧೯೭೭ ಫೆಬ್ರವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ







Prabhakar Mahadik — Devidas Kasbekar

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಡಿಸೆಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು - ೬೦೦೦೨೬

---

### ಅಕ್ಟೋಬರ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ಮೂಗು ಮುಟ್ಟೋದಂದ್ರೆ ಹೀಗೆ

ಎರಡನೇ ಫೋಟೋ: ಬೊಂಬೆ ಹಾಗೆ ನೋಡೋದಂದ್ರೆ ಹೀಗೆ

ಕಳುಹಿಸಿದವರು: ಟಿ. ವಿ. ಶೇಷಗಿರಿ,

೫೧, ವೆಸ್ಟ್ ಆಂಜನೇಯ ಟೆಂಪಲ್ ಸ್ಟ್ರೀಟ್, ಬೆಂಗಳೂರು - ೪

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor : NAGI REDDI.

# ಜೆಮ್ಸ್‌ನ ಮೋಜನ್ನು ಸವಿಯಿರಿ!

## ಗೆಲ್ಲಲು ಅದೃಷ್ಟದ 1001 ಬಹುಮಾನಗಳಿವೆ!

ಕಾಣೆಯಾದ ಸಂಖ್ಯೆ ಯಾವುದು?







ದಯವಿಟ್ಟು ಉತ್ತರವನ್ನು ಮತ್ತು ನಿಮ್ಮ ಹೆಸರು ಹಾಗೂ ವಿಳಾಸವನ್ನು ಇಂಗ್ಲಿಷ್‌ನಲ್ಲಿ ಮಾತ್ರ ಬರೆಯಿರಿ— ಅದು ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ, ಈ ವಿಳಾಸಕ್ಕೆ ಉತ್ತರಗಳನ್ನು ಕಳಿಸಿ:

"Fun with Gems"
Dept. E-16
Post Box No. 56.
Thane 400 601.
Maharashtra

ಉತ್ತರಗಳು ತಲುಪಲು ಕೊನೆಯ ತಾರೀಖು:

**12.1.1979**

## ತ್ವರೆ ಮಾಡಿರಿ!

ನಿಮ್ಮ ಉತ್ತರವನ್ನು, ಕ್ಯಾಡ್‌ಬರಿಸ್ ಜೆಮ್ಸ್‌ನ ಒಂದು ಖಾಲಿಯಾದ ದೊಡ್ಡ (30 ಗ್ರಾಂ) ಪ್ಲಾಸ್ಟಿಕ್ ಪ್ಯಾಕೆಟ್‌ನ ಜೊತೆಗೆ ಕಳಿಸಿರಿ. ಮೊದಲ 1001 ಸರಿ ಉತ್ತರಗಳನ್ನು ಕಳಿಸಿದವರಿಗೆ, ಪ್ರತಿಯೊಬ್ಬರಿಗೂ, 11 ರೂಪಾಯಿಯ ಸ್ಟೇಟ್ ಬ್ಯಾಂಕ್ ಉಡುಗೊರೆ ಚೆಕ್ ಕೊಡಲಾಗುವುದು.

**ಚಾಕ್‌ಲೇಟ್ ಉಳ್ಳ ಬಣ್ಣ ಬಣ್ಣದ ಕ್ಯಾಡ್‌ಬರಿಸ್ ಜೆಮ್ಸ್**

CHAITRA-C-I



# ಕರಡಿಕೆಂಗಣ್ಣ

೫

[ಜಿತಕೇತುರಾಜನನ್ನು ಶಿಕ್ಷಿಸಲು ಕರಡಿಕೆಂಗಣ್ಣನು ಕಾಳೀವರ್ಮ ಮೊದಲಾದವರನ್ನು ಕರೆದುಕೊಂಡು ನಗರದ ಕಡೆಗೆ ಹೋಗುವಾಗ, ದುರ್ಮುಖರಾಜನ ಸೈನಿಕರು ಅವರ ದಾರಿಯನ್ನು ಅಡ್ಡಗಟ್ಟಿದರು. ಕರಡಿಕೆಂಗಣ್ಣನು ದುರ್ಮುಖನ ಬಳಿಗೆ ಹೋಗಿ, ಕಟುಕನಾಯಕನನ್ನು ತನ್ನ ಮಂತ್ರದಂಡದಿಂದ ಮುಟ್ಟಿದ ಕೂಡಲೇ, ಅವನು ಭಯಂಕರ ಭಲ್ಲೂಕವಾಗಿ ಚಪಗೊಡಲಿಯನ್ನು ತಿರುಗಿಸುತ್ತಾ ದುರ್ಮುಖನ ಕಡೆಗೆ ಓಡಿದನು.]

ಮನುಷ್ಯನಾಗಿದ್ದ ಕಟುಕರನಾಯಕನು ಭಯಂಕರವಾದ ಕರಡಿಯ ರೂಪತಾಳಿದುದನ್ನು ನೋಡಿ ಎಲ್ಲರೂ ಭಯಾಶ್ಚರ್ಯಗಳಿಂದ ಸ್ತಂಭಿಸಿಹೋದರು. ಕಟುಕಕರಡಿ ಹಲ್ಲು ತೋರಿಸಿ ಕಿರಿಚುತ್ತ, ತಳತಳನೆ ಹೊಳೆಯುವ ಚಪಗೊಡಲಿಯನ್ನೆತ್ತಿಕೊಂಡು ತನ್ನ ಕಡೆಗೆ ಬರುವುದನ್ನು ನೋಡಿ ದುರ್ಮುಖರಾಜನು ಮರಗಟ್ಟಿದಂತಾದನು.

ಅಷ್ಟರಲ್ಲಿ ಕರಡಿರೂಪದ ಕಟುಕಪ್ರಮುಖ ತನಗೆ ಅಡ್ಡನಿಂತಿದ್ದ ದುರ್ಮುಖರಾಜನ ಅಂಗರಕ್ಷಕರಿಬ್ಬರನ್ನು ಕಾಲಿನಿಂದ ಬಲವಾಗಿ ಒದ್ದು ಜಾಡಿಸಲು, ಅವರಿಬ್ಬರೂ ದಡಾರನೆ ಮಗುಚಿ ಬಿದ್ದರು. ಮರುನಿಮಿಷದಲ್ಲಿ ಕಟುಕಕರಡಿ ದುರ್ಮುಖರಾಜನ ಉಚ್ಚಾಸನದ ಮೇಲೆ ಹಾರಿತು.

ಅದು ತನ್ನನ್ನು ಅಪ್ಪಚ್ಚಿ ಮಾಡುವುದರೊಳಗೆ ಎಚ್ಚೆತ್ತ ದುರ್ಮುಖನು ಆಚೆಗೆ ಹಾರಿ ತಪ್ಪಿಸಿಕೊಂಡು, "ಏನು ನೋಡ್ತೀರೋ! ಯಾರಲ್ಲಿ? ನಮ್ಮ ಸೈನಿಕರೆಲ್ಲಾ ಎಲ್ಲಿ ಸತ್ತರು? ಈ ಹುಚ್ಚು ಕರಡಿಯನ್ನು ಬಡಿಯಿರಿ! ಕಡಿಯಿರಿ!" ಎಂದು ಕೂಗುತ್ತಾ ಸ್ವಲ್ಪದೂರದವರೆಗೆ ಓಡಿ ತನ್ನ ಕುದುರೆಯ ಮೇಲೆ ಹಾರಿ ಕುಳಿತನು.



ಅವನೊಂದಿಗೇ ಮತ್ತೊಬ್ಬ ಅಂಗರಕ್ಷಕನೂ ಓಡುತ್ತಾ ಹೋಗಿ ಇನ್ನೊಂದು ಕುದುರೆಯ ಮೇಲೆ ಏರಿಕೊಂಡು ರಾಜನನ್ನು ಅನುಸರಿಸಿದನು. ಅವನು ರಾಜನ ಸಮೀಪ ಹೋಗಿ ತೇಕುತ್ತ, "ಮಹಾರಾಜರೇ, ನಾವೀಗ ಇಲ್ಲಿಂದ ಓಡಿ ಹೋಗುವುದೇ ಒಳ್ಳೆಯದು. ನಮ್ಮ ಸೈನಿಕರು ಎಲ್ಲಿಯೋ ನದಿಯ ಬದಿಯಲ್ಲಿ ಗುಡಾರಗಳಲ್ಲಿದ್ದಾರೆ. ಅವರಿಗೆ ಸುದ್ದಿ ಕಳುಹಿಸಿ, ಅವರು ಸಿದ್ಧರಾಗಿ ಬರುವುದರೊಳಗೆ, ಈ ದುಷ್ಟಮಾಂತ್ರಿಕ ತನ್ನ ಕರಡಿಯ ಮೂಲಕ ನಮ್ಮೆಲ್ಲರನ್ನೂ ಹತ ಮಾಡುತ್ತಾನೆ. ನಾವೀಗ ಅವನ ಮಂತ್ರಕ್ಕೆ ಸಿಕ್ಕದೆ ಆದಷ್ಟು ಬೇಗ ಓಡಿಬಿಡಬೇಕಾದ ಗಳಿಗೆಯಿದು !" ಎಂದನು.

ಅಂಗರಕ್ಷಕನು ಹೀಗೆ ಪುಕ್ಕಲು ಮಂತ್ರ ಹೇಳುತ್ತಿರಲು. ದುರ್ಮುಖರಾಜನು ಹಿಂದಿರುಗಿ ನೋಡಿದನು. ಕರಡಿಯಾದ ಕಟುಕರನಾಯಕ ಹಿಂದೆಯೇ ಓಡಿ ಬರುತ್ತಿದ್ದಾನೆ ! ಅವನು ಕುದುರೆಯನ್ನು ಒದ್ದು ಹುರುಡಿಸಿ ಜೋರಾಗಿ ಓಡಿಸತೊಡಗಿದನು. ಕುದುರೆಯೂ ಕರಡಿಯನ್ನು ನೋಡಿ ಹೆದರಿ, ಕಡಿವಾಣವನ್ನು ಬಿಡಿಸಿಕೊಳ್ಳುತ್ತ ಅತಿವೇಗವಾಗಿ ಓಟ ತೆಗೆಯಿತು.

ದರ್ಪತೋರಿಸಿ ಆಜ್ಞೆಮಾಡಿದ ದುರ್ಮುಖ ರಾಜನು ತನ್ನ ಅಂಗರಕ್ಷಕನೊಂದಿಗೆ ಹೆದರಿ ನೀರಾಗಿ ಓಡುವ ಚಂದವನ್ನು ನೋಡಿ ಕಾಳೀವರ್ಮನಿಗೆ ಏಕೋ ನಿರುತ್ಸಾಹವೆನಿಸಿತು.

ಅವನು ಕರಡಿಕೆಂಗಣ್ಣನೊಂದಿಗೆ, "ಗುರುವೇ, ಇಲ್ಲಿಯ ನೆರೆಹೊರೆ ರಾಜ್ಯಗಳ ರಾಜರೆಂದು ಹೆಮ್ಮೆ ಪಡುವ ಇಬ್ಬರು ರಾಜರಲ್ಲಿ ಒಬ್ಬನು ಕೈಗೆ ಸಿಕ್ಕಿಯೂ ತಪ್ಪಿಸಿಕೊಂಡು ಹೋಗುತ್ತಿದ್ದಾನೆ. ಕರಡಿಯಾದ ನಮ್ಮ ಕಟುಕನಾಯಕ ಅವನ ಬೆನ್ನು ಹತ್ತಿ ಹಿಡಿದುಕೊಳ್ಳುವನೆಂಬ ನಂಬುಗೆ ನನಗೆ ಕಾಣುವುದಿಲ್ಲ. ರಾಜನು ಕುದುರೇ ಮೇಲೆ ಬಲುವೇಗವಾಗಿ ಓಡುತ್ತಿದ್ದಾನೆ" ಎಂದನು.

ಕರಡಿಕೆಂಗಣ್ಣನು ತಲೆಯಾಡಿಸುತ್ತಾ, ಓಡುತ್ತಿರುವವರನ್ನು ನೋಡಿ, "ಚಿಂತಿಸಬೇಡ ಕಾಳೀವರ್ಮಾ. ಸ್ವಲ್ಪ ತಾಳು. ಆ ರಾಜ ನಮ್ಮ ಕಟುಕನಾಯಕನ ಚಪಗೊಡಲಿಗೆ ಸಿಗದೇಹೋದರೆ ನೀನೂ ಸುಮ್ಮನಿರುವವನಲ್ಲ, ನಾನೂ ಸುಮ್ಮನಿರುವವನಲ್ಲ. ನೋಡೋಣ ಬಿಡು" ಎಂದು ಹೇಳಿ, ಅಲ್ಲಿ ಪ್ರಾಣಭೀತಿಯಿಂದ ನಡುಗುತ್ತಾ ನಿಂತಿರುವ ದುರ್ಮುಖನ ಮಂತ್ರಿಯೇ ಮೊದಲಾದವರನ್ನು ನೋಡಿ, ಕೆಂಗಣ್ಣಿನಿಂದ ಹೆದರಿಸುತ್ತ, "ಓಹೊ ! ವೀರಾಧಿವೀರರಾದ ನೀವೆಲ್ಲಾ ಚಂದ್ರಶಿಲಾನಗರದ ಮೇಲೆ ದಾಳಿ ತೆಗೆಯಲು ಬಂದವರಲ್ಲವೇ ? ನಿಮ್ಮ ಜತೆಯಲ್ಲಿ ಸೈನ್ಯವೂ ಬಂದಿರ ಬೇಕಷ್ಟೆ ? ಸೈನ್ಯವೆಲ್ಲಾ ಎಲ್ಲಿದೆ ? ಅಂ ?" ಎಂದು ಕೇಳಿದನು.

ಆ ಪ್ರಶ್ನೆಗೆ ಉತ್ತರ ಕೊಡದೆ 'ನೀನು ಉತ್ತರ ಕೊಡು, ಅವನು ಕೊಡಲಿ' ಎಂಬಂತೆ ಅವರೆಲ್ಲ

ಮುಖಮುಖ ನೋಡಿಕೊಳ್ಳುತ್ತಿರಲು, "ಏನಾಯಿತು ನಿಮಗೆ ? ಕಿವಿ ಕೆಪ್ಪೇ ? ಬಾಯಿ ಬಿದ್ದಿತೇ ?" ಎಂದು ಅಧಟಿದನು ಕರಡಿಕೆಂಗಣ್ಣ.

ಆಗ ಅವರಲ್ಲೊಬ್ಬ ನಡುಗುವ ಸ್ವರದಿಂದ, "ಮಹಾಮಾಂತ್ರಿಕರಾದ ತಮಗೆ ಗೊತ್ತಿಲ್ಲದ್ದೇನೂ ಇಲ್ಲ. ಆದರೂ ಕೇಳುವಿರಿ, ಹೇಳುತ್ತೇವೆ. ಅವರೆಲ್ಲಾ ನದಿಯ ಬದಿಯಲ್ಲಿ ಗುಡಾರಗಳಲ್ಲಿದ್ದಾರೆ. ಬರಲಿರುವ ಯುದ್ಧದಲ್ಲಿ ಶತ್ರುಗಳನ್ನು ಸದೆಬಡೆಯಲು ಈಗ ತಮ್ಮ ಆಯುಧಗಳನ್ನು ಮಸೆದುಕೊಂಡಿರಬಹುದು" ಎಂದನು.

ಅದನ್ನು ಕೇಳಿ ಕರಡಿಕೆಂಗಣ್ಣನು ಗಡಗಡನೆ ನಕ್ಕನು. ಒಂದು ಬದಿಯಲ್ಲಿ ನಿಂತು ಅತ್ಯಾಶ್ಚರ್ಯದಿಂದ ನೋಡುತ್ತಿದ್ದ ಜೀವಗುಪ್ತನನ್ನು ನೋಡಿ ಕರಡಿಕೆಂಗಣ್ಣ ಮಾಂತ್ರಿಕನು, "ಎಲೋ ಚಂದ್ರಶಿಲಾ ನಗರದ ಮಹಾಮಂತ್ರಿಯೇ ! ದುರ್ಮುಖನ ಕಡೆಯ ಮಂತ್ರಿಗಳು ಹೇಳಿದ ಮಾತನ್ನು ಕೇಳಿದೆಯಾ ?" ಎಂದನು.

"ಕೇಳಿದೆನಯ್ಯಾ ಕೇಳಿದೆನು. ಇದನ್ನೆಲ್ಲಾ ನೋಡುವಾಗ ನನಗೆ ಬುದ್ಧಿಯೇ ಕೆಡುವ ಹಾಗಾಗಿದೆ. ಹಿಂದೆ ಮುಂದೆ ಒಂದೂ ತೋರುವುದಿಲ್ಲ. ನಿಮ್ಮ ಆಜ್ಞೆಯನ್ನೇ ಎದುರುನೋಡುತ್ತಿದ್ದೇನೆ" ಎಂದ ಮಂತ್ರಿ ಜೀವಗುಪ್ತ.

"ಭೇಷ್ ! ಭೇಷ್ ! ಹಾಗನ್ನು. ನಾನೂ ಕಾಳೀವರ್ಮನೂ ಈ ರಾಜ್ಯಗಳ ಗೊಡವೆ ಬಿಟ್ಟು ಹಿಮಾಲಯಪರ್ವತ ಶಿಖರಗಳಾಚೆಗಿರುವ ಕಣಿವೆಯೊಳಗೆ ಹೋಗಿ ಸೇರುವುದರೊಳಗೆ, ಇನ್ನೂ ಕೆಲವರಿಗೆ ಹಿಡಿದ ಅಹಂಕಾರವನ್ನು ಬಿಡಿಸಿ ಅವರ ಬುದ್ಧಿಯನ್ನೂ ಪೂರ್ತಿ ಕೆಡಿಸಬೇಕೆಂದಿದ್ದೇನೆ. ಆಗಬಹುದಪ್ಪೆ ?" ಎಂದು ಕರಡಿಕೆಂಗಣ್ಣನು ಮಂತ್ರದಂಡವನ್ನು ಗಟ್ಟಿಯಾಗಿ ನೆಲಕ್ಕೆ ಠಂಗಠಂಗನೆ ಕುಟ್ಟಿದನು. "ಎಲ್ಲವೂ ತಮ್ಮ ದಯೆ !" ಎಂದು ಮಂತ್ರಿ



ಜೀವಗುಪ್ತನು ತಲೆಬಾಗಿ ಕೈಮುಗಿದನು. ಕರಡಿಕೆಂಗಣ್ಣನು ಮತ್ತೇನೋ ಹೇಳಲಿರುವಾಗ, ಕಾಳೀವರ್ಮನು ಮಾವಿನ ತೋಪಿನಾಚೆಗೆ ದೂರಕ್ಕೆ ಕಣ್ಣೋಡಿಸುತ್ತ "ಗುರುವೇ, ಅತ್ತ ಕಡೆಯಿಂದ ಬಹಳ ಮಂದಿ ಸೈನಿಕರು ಕತ್ತಿಗಳನ್ನೂ ಈಟಿಗಳನ್ನೂ ಎತ್ತಿ ಹಿಡಿದುಕೊಂಡು ನಮ್ಮ ಕಡೆಗೆ ಬರುತ್ತಿದ್ದಾರೆ !" ಎಂದು ಹೇಳಿ ಒರೆಯೊಳಗಿನಿಂದ ಕತ್ತಿಯನ್ನು ಹಿರಿದು, ಅಲ್ಲಿ ನಿಂತಿರುವ ಜಿತಕೇತುರಾಜನ ಸೈನಿಕರನ್ನು ನೋಡಿ ಸಿದ್ಧರಾಗುವಂತೆ ಹೂಂ ಎಂದು ಕಣ್ಣು ಹಾರಿಸಿ ಸನ್ನೆಮಾಡಿದನು.

ಆಗ ಕರಡಿಕೆಂಗಣ್ಣನು ಭಯಕಂಪಿತರಾಗಿ ನಿಂತಿದ್ದ ದುರ್ಮುಖರಾಜನ ಕಡೆಯವರನ್ನು ನೋಡಿ, "ಅಲ್ಲಿ ಬರುವ ಸೈನಿಕರು ನಿಮ್ಮ ಕಡೆಯವರೇ. ಈಗ ನಿಮ್ಮಲ್ಲಿ ಒಬ್ಬನು ಮುಂದಾಗಿ ಹೋಗಿ ಇಲ್ಲಿ ನಿಮ್ಮ ರಾಜನಿಗೆ ಹಿಡಿದ ದುಃಸ್ಥಿತಿ ಏನೆಂಬುದನ್ನು ಆ ಸೈನಿಕರ ದಳಪತಿಯೊಂದಿಗೆ ಹೇಳಿರಿ. ನಿಮ್ಮ ಮಾತು



ಕೇಳದೆ ಅವನು ಮೂರ್ಖತನದಿಂದ ನನ್ನವರ ಮೇಲೆ ದಾಳಿ ಮಾಡಲು ಯತ್ನಿಸಿದ ಪಕ್ಷದಲ್ಲಿ ನಿಮ್ಮನ್ನೆಲ್ಲಾ ಹುಲಿಗಳನ್ನಾಗಿ, ಅವರನ್ನೆಲ್ಲಾ ಚಿಗರೆಗಳನ್ನಾಗಿ ಮಾರ್ಪಡಿಸಿ ನಿಮ್ಮ ಹೊಟ್ಟೆಗಳಿಗೆ ಅವರನ್ನೇ ಆಹಾರವಾಗಿ ಒಡ್ಡಿಸಿಬಿಡುತ್ತೇನೆ ! ಜೋಕೆ !" ಎಂದನು.

"ನಿಜ ನಿಜ ! ಮಹಾಮಾಂತ್ರಿಕರಾದ ನೀವು ಹಾಗೂ ಮಾಡುವಿರಿ. ನಮ್ಮ ಕಣ್ಣೆದಿರೇ ಕಟುಕ ನಾಯಕನನ್ನು ಭಯಂಕರ ಶಕ್ತಿಯ ಕರಡಿಯಾಗಿ ಮಾಡಿದಿರಲ್ಲಾ ? ಏನಾಶ್ಚರ್ಯ ! ಅಬ್ಬಬ್ಬಾ !" ಎಂದನು ಜೀವಗುಪ್ತ.

ಇದನ್ನು ಕೇಳಿ ದುರ್ಮುಖರಾಜನ ಮಂತ್ರಿ ಮೊದಲಾದವರಿಗೆ ಏನೂ ತೋರದೆ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಆಮೇಲೆ ಅವರಲ್ಲಿ ಒಬ್ಬನು ಅಲ್ಲಿಂದ ಹೊರಟು, ತಮ್ಮ ಕಡೆಗೆ ಬರುವ ಸೈನಿಕರ ಬಳಿಗೆ ಹೋಗಿ, ದಳಪತಿಯನ್ನು ಸಂಧಿಸಿ, ನಡೆದ ಸಂಗತಿಯನ್ನೆಲ್ಲಾ ಹೇಳಿ, "ಹೀಗಾದುದು ನಿಜ. ನಮ್ಮ ಮಹಾರಾಜರು ಜೀವದೊಂದಿಗೆ ನಮ್ಮ ಕಣ್ಣಿಗೆ ಬೀಳುವವರೆಗೆ ನಾವು ಈ ಭಯಂಕರನಾದ ಮಂತ್ರಗಾರನು ಹೇಳಿದ ಹಾಗೆ ಕೇಳುವುದೇ ಒಳ್ಳೆಯದು. ಹೆಚ್ಚು ಕಡಿಮೆಯಾದರೆ ಆಗಬಾರದ್ದೇ ಆದೀತು ! ಆದುದರಿಂದ ನೀವು ದುಡುಕಬಾರದು" ಎಂದನು.

ಆ ಮಾತು ಕೇಳಿ ದಳಪತಿಗೆ ಕೋಪವೇ ಬಂದಿತು. ಅವನು ತನ್ನೊಂದಿಗಿರುವ ಐವತ್ತುಮಂದಿ ಸೈನಿಕರನ್ನು ನೋಡಿ, "ಇವನು ಹೇಳಿದ್ದನ್ನು ನೀವೂ ಕೇಳಿದಿರಷ್ಟೆ ? ಇದೆಲ್ಲವೂ ಕೇವಲ ಕಣ್ಣುಕಟ್ಟು ಆಟವೆಂದೇ ನನಗೆ ತೋರುತ್ತದೆ. ನಾವಿಷ್ಟುಮಂದಿ ಆಯುಧಪಾಣಿಗಳು ಒಮ್ಮೆಗೇ ಹೋಗಿ ಆ ಮಂತ್ರವಾದಿಯ ಮೇಲೆ ಬಿದ್ದು, ಅವನನ್ನೂ ಅವನ ಅನುಚರರನ್ನೂ ಚಚ್ಚಿಹಾಕಬಹುದು. ಏನನ್ನುವಿರಿ ?" ಎಂದನು.

"ಆದರೂ ಅವನು ಮಂತ್ರಗಾರನೆಂಬುದನ್ನು ಮರೀಬಾರದು ಅವನು ಛೂ ಅಂದು ಒಮ್ಮೆಗೇ ನಮ್ಮನ್ನೆಲ್ಲಾ ಚಿಗರೆಯಾಗಿ ಹುಲಿಗಳಾಗಿ ಮಾರ್ಪಡಿಸಿಬಿಟ್ಟರೆ ಏನು ಗತೀ ? ಕಣ್ಣುಕಟ್ಟು ವಿದ್ಯೆ ಅಂದರೆ ಬೆಂಕೀ ಇದ್ದ ಹಾಗೆ. ನಮಗೆ ಎಂಥ ದುರ್ಗತಿ ಬಂದೀತೆಂಬುದನ್ನು ಆಲೋಚಿಸಲೇ ಬೇಕಲ್ಲವೇ ?" ಎಂದು ಗುಂಪಿನಲ್ಲಿದ್ದ ಒಬ್ಬ ಸೈನಿಕನು ಹೇಳಿ, ಎಲ್ಲರ ಕಡೆಗೂ ನೋಡಿದನು.

"ಅಯ್ಯಾ, ದಳಪತಿಗಳೇ, ನಾವು ದುರ್ಮುಖ ಮಹಾರಾಜರ ಉಪ್ಪು ತಿನ್ನುವವರಾದುದರಿಂದ, ಅಗತ್ಯಬಿದ್ದರೆ ಅವರಿಗಾಗಿ ಪ್ರಾಣವನ್ನಾದರೂ ಕೊಡಬೇಕಾದ್ದೇ. ಆದರೆ ಈಗ ಕೇಳಿದ ಸಮಾಚಾರದಿಂದ, ಮಹಾರಾಜರು ಇನ್ನೂ ಜೀವದೊಂದಿಗಿದ್ದಾರೆಂಬ ನಂಬುಗೆ ಏನು ? ಮಂತ್ರದ ಮನುಷ್ಯ ಕರಡಿ ಅವರ ಬೆನ್ನಟ್ಟಿದೆಯಲ್ಲ ? ಆ ಭಯಂಕರ ಭಲ್ಲೂಕದ ಚಪಗೊಡಲಿಯಿಂದ ಮಹಾರಾಜರ ತಲೆ ಉರುಳಿಬಿದ್ದಿ



ರಲೂಬಹುದಷ್ಟೆ? ಹಾಗಿದ್ದರೆ ನಮ್ಮ ಸಾಹಸವೂ ರಾಜಭಕ್ತಿಯೂ ವ್ಯರ್ಥತಾನೇ? ಸುಮ್ಮಸುಮ್ಮನೆ ಬಾವಿಗೆ ಬೀಳಲೇ ಬೇಕೆ?" ಎಂದು ಇನ್ನೊಬ್ಬ ಸೈನಿಕನು ಮುಂದೆ ಬಂದು ಹೇಳಿದನು.

ಆ ಸೈನಕನ ಮಾತನ್ನು ಕೇಳುವಾಗ ದಳಪತಿಯ ಮನಸ್ಸಿನಲ್ಲಿ ಒಂದು ಮಿಂಚು ಹೊಳೆಯಿತು. ಆದರ ಬೆನ್ನಿಗೆ ದುರಾಶೆಯ ಹೆಡೆಯೊಂದು ಆಡತೊಡಗಿತು. ಅವನು ಸುತ್ತಲೂ ನೋಡುತ್ತ, ಮಹಾರಾಜರು ಸತ್ತುಗಿತ್ತು ಹೋಗಿದ್ದರೆ ಸಿಂಹಾಸನಕ್ಕಾಗಿ ತಾನೇಕೆ ಪ್ರಯತ್ನಿಸಬಾರದು? ಎಂದುಕೊಳ್ಳುತ್ತ, ಸೈನಿಕರನ್ನು ಕುರಿತು, "ಹಾಗಾದರೆ ಒಂದು ಮಾಡುವ. ನಾವೀಗ ಚಂದ್ರಶಿಲಾನಗರದ ಕಡೆಗೆ ದಾಳಿ ಹೊರಡುವುದನ್ನು ನಿಲ್ಲಿಸಿ, ಉಳಿದ ಸೈನಿಕರೊಂದಿಗೆ ಕೂಡಿ ಉದಯಗಿರಿ ನಗರಕ್ಕೆ ಹಿಂದಿರುಗಿಬಿಡುವುದೇ ಒಳ್ಳೆಯದು. ಈ ಮಂತ್ರವಾದಿಯ ತಂಟೆಯೇ ನಮಗೆ ಬೇಡ" ಎಂದನು.

ಹೀಗೆ ಅವನು ಆಲೋಚನೆ ಮಾಡುತ್ತಿರಲು, ಕರಡಿಕಿಂಗಣ್ಣನು ಅಲ್ಲಿಗೆ ಬಂದು ತನ್ನ ಬಳಿಯಲ್ಲಿದ್ದ ಕಾಳೀವರ್ಮನಿಗೆ ಕಣ್ಣು ಸನ್ನೆ ಮಾಡಿ, "ಕಾಳೀವರ್ಮ, ಈ ದುರ್ಮುಖರಾಜನ ಸೈನಿಕರಿಗೆಲ್ಲ ನಿನ್ನನ್ನೇ ನಾಯಕನನ್ನಾಗಿ ನಿಯಮಿಸುತ್ತೇನೆ. ಈ ದಳಪತಿ ತನ್ನ ಕತ್ತಿಯನ್ನು ನಿನ್ನ ಕೈಗೆ ಒಪ್ಪಿಸತಕ್ಕದ್ದು. ಕೇಳಿ ನೋಡು! ಒಳ್ಳೆಯ ಮಾತಿನಲ್ಲಿ ಕೊಟ್ಟರೆ ಸರಿ" ಎಂದನು. ಈ ಮಾತು ದಳಪತಿಯ ಎದೆಯನ್ನು ಜುಮ್ಮೆನಿಸಿತು.

ಕಾಳೀವರ್ಮನು ಆ ದಳಪತಿಯ ಬಳಿಗೆ ಹೋಗಿ, "ನಮ್ಮ ಗುರುಗಳು ಹೇಳಿದ ಮಾತು ಕೇಳಿದೆಯಷ್ಟೆ? ಎಲ್ಲಿ, ನಿನ್ನ ಕತ್ತಿಯನ್ನು ನನ್ನ ಕೈಗೆ ಕೊಡುವೆಯಾ? ಅಥವಾ ನೆಲಕ್ಕೆ ಜಾರಬಿಡುವೆಯಾ? ಎರಡರಲ್ಲೊಂದು ಬೇಗ ಮಾಡು" ಎಂದನು. ಆ ದಳಪತಿ ಅನುಮಾನಪಡುತ್ತ, ಕಾಳೀವರ್ಮನ ಕಡೆಗೂ, ಕರಡಿಕಿಂಗಣ್ಣನ ಕಡೆಗೂ ನೋಡುತ್ತ, ಕತ್ತಿ ಹಿಡಿದ ಕೈ ನಡುಗುತ್ತಿರಲು, "ಕತ್ತಿಯನ್ನು ನಿಮ್ಮ ಸ್ವಾಧೀನ ಮಾಡುವುದೆಂದರೆ, ನಾನು ನನ್ನ ಒಡೆಯರಾದ ದುರ್ಮುಖ ಮಹಾರಾಜರಿಗೆ ದ್ರೋಹ ಬಗೆದಂತೆ ಆಗುವುದಿಲ್ಲವೇ? ನನ್ನನ್ನು ರಾಜದ್ರೋಹ ಮಾಡುವಂತೆ ನಿಮ್ಮಂಥವರು ಹೇಳಬಹುದೇ?" ಎಂದನು.

"ನಿನ್ನದು ಬುದ್ಧಿವಂತಿಕೆಯ ಅಭಿಪ್ರಾಯವೇನೋ ಹೌದು. ಆದರೆ ನಿನ್ನ ರಾಜ ಒಂದು ಕರಡಿಗೆ ಹೆದರಿ, ನಿಮ್ಮನ್ನೆಲ್ಲಾ ನಿಮ್ಮ ನಿಮ್ಮ ಕರ್ಮಕ್ಕೇ ಬಿಟ್ಟು ಓಡಿಹೋಗಿದ್ದಾನೆ. ಅದು ಯಾವ ಬಗೆಯ ಪ್ರಭುಲಕ್ಷಣ?" ಎಂದು ಹೇಳಿ ಕರಡಿಕಿಂಗಣ್ಣನು, ದಳಪತಿಯ ಹತ್ತಿರವಿದ್ದ ಒಬ್ಬ ಸೈನಿಕನ ಕೈಯನ್ನು ಹಿಡಿದು ಹಿಂದಕ್ಕೆ ತಿರುಗಿಸಿ, ಅವನ ಬೆನ್ನಿನ ಮೇಲೆ ಮಂತ್ರದಂಡವನ್ನು ತಾಗಿಸಿ, "ಇಗೋ ಇವನ ಬೆನ್ನಿನ ಮೇಲೆ ನಾನು ಅಂಜನ ಹಾಕುತ್ತೇನೆ. ದುರ್ಮುಖ



ನೊಂದಿಗೆ ಯಾವುದೋ ಒಂದು ಬದಿಗೆ ಓಡಿದನು. ಅಷ್ಟರಲ್ಲಿ ಆನೆಗೆ ಇದಿರಾಗಿ ಕರಡಿಕಟುಕನು ಓಡಿ ಬಂದನು. ಆನೆ ಆ ಕರಡಿಯನ್ನು ಸೊಂಡಿಲಿನಿಂದ ಹಿಡಿದು ಮೇಲಕ್ಕೆತ್ತಲು ನೋಡಿತು. ಕಟುಕನು ಭೀಕರವಾಗಿ ಕೂಗುತ್ತ ಆನೆಯ ಸೊಂಡಿಲಿನ ಮೇಲೆ ತನ್ನ ಚಪಗೊಡಲಿಯ ಏಟನ್ನು ಹಾಕತೊಡಗಿದನು. ಆ ಪೆಟ್ಟಿಗೆ ಸೊಂಡಿಲು ಅರ್ಧತುಂಡಾಗಿ ಜೋಲಾಡು ತ್ತಿರಲು, ಆನೆ ಘೀಂಕರಿಸುತ್ತ ಹಿಂದಕ್ಕೆ ತಿರುಗಿತು. ಆಗ ಕಟುಕಕರಡಿ ಆನೆಯ ಕುಂಭಸ್ಥಳದ ಮೇಲೆ ಹಾರಿ ಕುಳಿತು, ಕೊಡಲಿಯ ಹಿಡಿಯಿಂದ ಹೊಡೆ ಯುತ್ತ, "ಆ ದುಷ್ಟದುರ್ಮುಖನೆಲ್ಲಿ? ಓಡು ಅವನ ಬೆಂಬತ್ತಿ! ಅವನನ್ನು ಹಿಡಿದು ತಲೆ ಕಡಿಯಬೇಕು!" ಎಂದು ಅರಚಿ ಹೇಳಿತು.

ಇಷ್ಟಾಗುವಾಗ ದುರ್ಮುಖರಾಜನು ಕಾಡಿ ನೊಳಗೆ ಬಹುದೂರ ಓಡಿ ಹೋಗಿದ್ದನು. ಅವನಿಗೆ ಕಟುಕಕರಡಿಯೊಂದಿಗೆ ಆನೆ ಕೂಡಾ ತನ್ನ ಬೆಂಬತ್ತಿ ಬರುವುದೆಂಬ ಭ್ರಮೆಯಾಗಿತ್ತು.

ಅವನನ್ನು ಬಿಡದೆ ಅನುಸರಿಸಿಕೊಂಡಿದ್ದ ಅಂಗ ರಕ್ಷಕನು, "ಮಹಾರಾಜರೆ, ನಾವು ಸಿಕ್ಕಾಬಟ್ಟೆ ಓಡುತ್ತ, ನಮ್ಮ ರಾಜ್ಯದ ಮೇರೆಯನ್ನು ಕೂಡಾ ದಾಟಿಹೋದ ಹಾಗಿದೆ. ಇದು ಯಾವ ಪ್ರದೇ ಶವೋ?" ಎಂದನು.

ದುರ್ಮುಖರಾಜನು ಕೋಪದಿಂದ, "ಎಲೋ ಮೂರ್ಖನೇ, ಪ್ರಾಣಕ್ಕಿಂತ ರಾಜ್ಯದ ಮೇರೆ ಬೆಲೆ ಬಾಳುವಂಥಾದ್ದೇನು?" ಎಂದು ಕುದುರೆಯನ್ನು ಚಾಟಿಯಿಂದ ಬಲವಾಗಿ ಹೊಡೆದನು.

ಈ ದೃಶ್ಯವು ಕಾಣುತ್ತಿರಲು ಕರಡಿಕೆಂಗಣ್ಣನು ಸೈನಿಕನ ಬೆನ್ನಿನ ಮೇಲೆ ಮಂತ್ರದಂಡದಿಂದ ಗಟ್ಟಿ ಯಾಗಿ ತಿವಿದನು.

ಅವನು ನೋವಿನಿಂದ ಹಾರಿಬೀಳಲು, ಕರಡಿ ಕೆಂಗಣ್ಣನು, "ಛೆಛೇ! ನಾನು ಹಾಕಿದ ಅಂಜನವನ್ನು

ರಾಜ ಯಾವ ದುರವಸ್ಥೆಯಲ್ಲಿದ್ದಾನೆಂದು, ನೀನೂ ನಿನ್ನ ಸೈನಿಕರೂ ನೋಡಿರಿ! ನಿಮ್ಮ ಧರ್ಮಸಂದೇಹ ತೀರಿಹೋಗಲಿ!" ಎಂದನು.

ಆ ಮರುಕ್ಷಣದಲ್ಲಿ ಆ ಸೈನಿಕನ ಬೆನ್ನಿನ ಮೇಲೆ ವಸ್ತ್ರದ ಭಾಗದಲ್ಲಿ ಕರಿನೀಲಿಯ ನೆರಳು ಆವರಿಸಿತು. ಅದು ತಳತಳನೆ ಹೊಳೆಯತೊಡಗಿತು. ಅದರಲ್ಲಿ ಅರಣ್ಯದ ಮರಗಳೂ, ಅವುಗಳ ನಡುವೆ. ಕುದು ರೆಯ ಮೇಲೆ ಅತಿವೇಗವಾಗಿ ಓಡುತ್ತಿರುವ ದುರ್ಮುಖರಾಜನೂ, ಅವನಂತೆಯೇ ಓಡುತ್ತಿರುವ ಅಂಗರಕ್ಷಕನೂ ಕಂಡು ಬಂದರು. ಕರಡಿಯಾದ ಕಟುಕನಾಯಕನು ಅವರನ್ನು ಓಡಿಸಿಕೊಂಡು ಓಡು ತ್ತಿದ್ದನು. ಮುಂದೆ ಹೋಗುತ್ತಿದ್ದ ಕುದುರೆಯನ್ನು ಮರಗಳ ಗುಂಪಿನಿಂದ ಹೊರ ಬಂದ ಆನೆಯೊಂದು ಅಡ್ಡ ಬಂದು ಸೊಂಡಿಲಿನಿಂದ ಹೊಡೆಯಲು ನೋಡಿತು. ದುರ್ಮುಖನು ಕೆಟ್ಟದನಿಯಿಂದ ಅರ ಚುತ್ತ, ಆನೆಯಿಂದ ತಪ್ಪಿಸಿಕೊಂಡು ಅಂಗರಕ್ಷಕ

ಇವನು ಹಾಳು ಮಾಡಿಬಿಟ್ಟ! ಸರಿ. ಈಗ ನಿಮ್ಮ ರಾಜ ದುರ್ಮುಖನು ಜೀವ ಹಿಡಿದುಕೊಂಡು ಪಲಾಯನ ಮಾಡುವುದನ್ನು ನೋಡಿದಿರಷ್ಟೇ? ಅವನೀಗ ಬದುಕಿದ್ದರೂ ಸತ್ತ ಹಾಗೆತಾನೆ? ಈಗೇನು ಹೇಳುವಿರಿ?" ಎಂದು ದಳಪತಿಯನ್ನೂ ಸೈನಿಕರನ್ನೂ ಕೇಳಿದನು.

ಕರಡಿಕೆಂಗಣ್ಣನ ಮಹಾಶಕ್ತಿಯನ್ನು ಕಣ್ಣಾರೆ ಕಂಡ ದುರ್ಮುಖನ ಸೈನಿಕರು ಏಕಕಂಠದಿಂದ, "ತಮ್ಮ ಅಪ್ಪಣೆಯೇ ನಮಗಿನ್ನು ಶಿರಸಾವಾನ್ಯ" ಎಂದು ಕೂಗುತ್ತ ಕೈಜೋಡಿಸಿ ತಲೆಬಾಗಿಸಿದರು.

"ಹಾಗಾದರೆ ಒಳ್ಳೆಯದು. ನೀವೆಲ್ಲರೂ ನನ್ನ ಹಿಂದೆ ಚಂದ್ರಶಿಲಾನಗರಕ್ಕೆ ಬನ್ನಿ. ಅಲ್ಲಿಯ ಚಿತ್ರಕೇತುರಾಜನ ಸಮಾಚಾರ ಯಾವ ತರಗತಿಯದೆಂದು ನೋಡಬೇಕು. ಈ ಕ್ಷಣದಿಂದ ನಿಮಗೆಲ್ಲಾ ನಾಯಕನಾಗಿರುವವನು ಈ ಕಾಳೀವರ್ಮ! ತಿಳಿಯಿತೇ? ದುರ್ಮುಖನ ದಳಪತಿಯೇ! ನಿನಗೂ ಸಹ!" ಎಂದ ಕರಡಿಕೆಂಗಣ್ಣ.

ಆಮೇಲೆ ಎಲ್ಲರೂ ಕೂಡಿ ಚಂದ್ರಶಿಲಾನಗರದ ಕಡೆಗೆ ಹೊರಟರು. ಇದೇ ಸಮಯದಲ್ಲಿ ಕಾಡು ಬಿದ್ದು ಓಡುತ್ತಿದ್ದ ದುರ್ಮುಖರಾಜನನ್ನೂ, ಅವನ ಅಂಗರಕ್ಷಕನನ್ನೂ ಮರದ ಕೊಂಬೆಗಳಲ್ಲಿ ಅಡಗಿದ್ದ ನಾಗಮಲ್ಲನೆಂಬ ಕಳ್ಳರ ನಾಯಕನು ನೋಡಿಬಿಟ್ಟನು. ಅವನೊಂದಿಗೆ ಇಬ್ಬರು ಅನುಚರರೂ ಇದ್ದರು. ನಾಗಮಲ್ಲನು ಅನುಚರರೊಂದಿಗೆ, "ಎಲೋ, ಮುಂದಿನ ಕುದುರೆಯಲ್ಲಿ ಬರುವವನ ದುಸ್ತುಗಿಸ್ತು ನೋಡಿದರೆ ಯಾವನೋ ದೊಡ್ಡ ಸಂಪನ್ನನಾಗಿರುವಂತೆ ಕಾಣುತ್ತದೆ. ಅವನ ಹಿಂದೆ ಬರುವವನು ಅವನ ನೌಕರನೋ ಸೈನಿಕನೋ ಇರಬೇಕು. ಇಬ್ಬರನೂ ಜೀವದೊಂದಿಗೆ ಹಿಡಿದುಬಿಟ್ಟರೆ, ಆಮೇಲೆ ಅವರ ಸಂಬಂಧಿಕರಿಂದ, ಇವರ ಬಿಡುಗಡೆಗಾಗಿ ಗುಡ್ಡದಷ್ಟು ಹಣ ಎಳೆಯಬಹುದು. ಇಂಥ ಸಂದರ್ಭ ಬಿಡಬಾರದು" ಎಂದನು.

"ಹೌದು ಹೌದು" ಎಂದರು ಇಬ್ಬರೂ. ಅವರಿಬ್ಬರ ಕೈಯಲ್ಲಿಯೂ ಹಗ್ಗದ ಸುರುಳಿಗಳಿದ್ದುವು.



ಒಬ್ಬನು ತನ್ನ ಹಗ್ಗದ ಸುರುಳಿಯನ್ನು ಅತ್ತಿತ್ತ ಬೀಸುತ್ತ, "ದೊರೇ! ಇವರ ಎದುರಿಗೆ ಹೋಗಿ ಜೀವದಿಂದ ಹಿಡಿಯುವ ಕೆಲಸ ನಡೆಯುವಂಥಾದ್ದಲ್ಲ. ಅವರು ಕತ್ತಿಗಳನ್ನು ಹಿರಿದು ನಮ್ಮನ್ನು ಚೆನ್ನಾಗಿ ಎದುರಿಸಬಲ್ಲವರು. ಮೊದಲು ಒಬ್ಬನನ್ನು ಈ ಹಗ್ಗದ ಉರುಳಿನಲ್ಲಿ ಬಂಧಿಸಿಬಿಟ್ಟರೆ ಹೇಗಿರುತ್ತೇ?" ಎಂದನು.

"ಓ! ಭಲೇ ಚೆನ್ನಾಗಿರುತ್ತೆ, ಒಳ್ಳೇ ಉಪಾಯ! ಅಕೋ, ಸಮೀಪಿಸುತ್ತಿದ್ದಾರೆ. ಅಳವಿಗೆ ಬಂದ ಕೂಡಲೇ ಮುಂದಿನ ಪ್ರಮುಖನನ್ನು ಹಿಡಿದುಬಿಡು. ಉರುಳು ಸರಿಯಾಗಿ ಅವನ ಸೊಂಟಕ್ಕೆ ಬೀಳಲಿ, ಹಾಗೇ ಎತ್ತಿಬಿಡು ಮೇಲೆ. ಎರಡನೇಯವನ ಸಮಾಚಾರ ನಾವಿಬ್ಬರೂ ನೋಡುತ್ತೇವೆ" ಎಂದ ಚೋರ ನಾಯಕ ನಾಗಮಲ್ಲ.

ದುರ್ಮುಖರಾಜನೂ ಅವನ ಅಂಗರಕ್ಷಕನೂ ಇಂತಹ ಮಹಾರಣ್ಯದಲ್ಲಿ ಕರಡಿಕೆಂಗಣ್ಣ ಮಾಂತ್ರಿಕನಿಂದಲೂ, ಅವನು ಸೃಷ್ಟಿಸಿದ ಕರಡಿಯಿಂದಲೂ ಅಪಾಯ ಬರುವುದನ್ನೇ ನೋಡಿಕೊಂಡು ಓಡಿಬರುತ್ತಿದ್ದರು. ಬೇರೆ ಬಗೆಯ ಅಪಾಯವನ್ನು ಅವರು ಊಹಿಸಿ ಕೂಡ ಇರಲಿಲ್ಲ. ಅವರು ಕಟುಕ ಕರಡಿಯಿಂದಲೂ, ಹುಚ್ಚಾನೆಯಿಂದಲೂ ಸಾಧ್ಯವಾದಷ್ಟು ದೂರ ಓಡುವ ಆತುರದಲ್ಲೇ ಇದ್ದರು.

ದುರ್ಮುಖನ ಕುದುರೆ ದೊಡ್ಡದೊಂದು ಮರದ ಬುಡದಿಂದಾಗಿ ಓಡುತ್ತಿರುವಾಗ, ಕೊಂಬೆಯಲ್ಲಿ ಹೊಂಚಿಕೊಂಡಿದ್ದ ನಾಗಮಲ್ಲನ ಅನುಚರನು ಕೈಯಲ್ಲಿದ್ದ ಹಗ್ಗದ ಉರುಳನ್ನು ಗುರಿನೆಟ್ಟು ಅವನ ಮೇಲೆ ಬೀಸಿದನು.

ಆಕಸ್ಮಿಕವಾಗಿ ಫಕ್ಕನೆ ತನ್ನ ಸೊಂಟದ ಮೇಲೆ ಹೆಬ್ಬಾವು ಬಿದ್ದು ಸುತ್ತಿಕೊಂಡಿತೇನೋ ಎಂದು ಅವನು ಅದುರಿ ಬೀಳುವುದರೊಂದಿಗೆ, ಕುದುರೆ ವೇಗವಾಗಿ ಮುಂದಕ್ಕೆ ಜಾರಿಕೊಂಡು ಓಡಿತು. ದುರ್ಮುಖನು ಹಗ್ಗದ ಉರುಳಿನಲ್ಲಿ ಸಿಕ್ಕಿ ಮೇಲಕ್ಕೆ ಎಳೆಯಲ್ಪಡುತ್ತಿದ್ದನು.

ಏನು ನಡೆಯಿತೆಂಬುದೇ ಅರ್ಥವಾಗದೆ ಅವನು ಕೆಟ್ಟದನಿಯಿಂದ ಕೂಗುತ್ತಿರಲು, ನೇತಾಡುತ್ತಾ ಮೇಲೆ ಮೇಲೆ ಹೋಗಲ್ಪಟ್ಟನು. ಯಮದೂತನೇ ತನ್ನನ್ನು ಎಳೆಯುವವನೆಂದು ಅವನು ಒದ್ದಾಡುತ್ತಿರಲು, ನಾಗಮಲ್ಲನೂ, ಇನ್ನೊಬ್ಬ ಕಳ್ಳನೂ ಕಿವಿಗಳು ಒಡೆಯುವ ಹಾಗೆ ಭೀಕರವಾಗಿ ಕೂಗುತ್ತ, ಕತ್ತಿಗಳನ್ನು ಝುಳಪಿಸಿಕೊಂಡು ಸರಸರನೆ ಕೆಳಗಿಳಿಯ ತೊಡಗಿದರು. ಆಗಲೇ ದುರ್ಮುಖನ ಅಂಗರಕ್ಷಕನೂ ಆ ಮರದ ಬುಡಕ್ಕೆ ಬಂದನು. ಕಳ್ಳರಿಬ್ಬರೂ ಅವನ ಮುಂದೆ ಹಾರಿ ಗರ್ಜಿಸಿದರು.

(ಇನ್ನೂ ಇದೆ)

